...ಕ ಪ್ರಚಾರಮಾಲೆ ೨



# ನಮ್ಮ ಸಾಹಿತ್ಯ

ಬಿ. ಶಂಕರ ಭಟ್ಟ

ಬಿ. ಎಮ್. ಶರ್ಮಾ

೧೯೫೫

ಪ್ರಕಾಶಕರು:

**ಕನ್ನಡ ಪ್ರಪಂಚ ಪ್ರಕಾಶನ**

ಮಂಗಳೂರು 2

ಪುಸ್ತಕ ಪ್ರಚಾರಮಾಲೆ ೨

# ನಮ್ಮ ಸಾಹಿತ್ಯ

ಬಿ. ಶಂಕರ ಭಟ್ಟ

ಬಿ. ಎಮ್. ಶರ್ಮಾ

೧೯೫೫

ಪ್ರಕಾಶಕರು:

**ಕನ್ನಡ ಪ್ರಪಂಚ ಪ್ರಕಾಶನ**

ಮಂಗಳೂರು 2

# ಒಂದು ಮಾತು

"ನಮ್ಮ ಸಾಹಿತ್ಯ" ನಾವು ಆಗಾಗ ಬರೆದ ಸಾಹಿತ್ಯಿಕ ವಿಚಾರ ಪ್ರಬಂಧಗಳ ಸಂಗ್ರಹ. ಈ ಸಂಗ್ರಹದಲ್ಲಿ ಬಂದಿರುವ "ನಮ್ಮ ಸಾಹಿತ್ಯದ ಸಾಗಾಟ" ಎಂಬುದು ಕೆಲವು ವರ್ಷಗಳ ಮೊದಲು ಮಂಗಳೂರಿನ ಅರುಣ ಮಾಸಿಕದಲ್ಲಿ ಬಂದಿದೆ. "ಹೊಸಗನ್ನಡ ಗದ್ಯಸಾಹಿತ್ಯ" ಎಂಬುದು ಹತ್ತು ವರ್ಷಗಳ ಮೊದಲಿನ ಒಂದು ಭಾಷಣದ ಉತ್ತರಾರ್ಧ. "ಕಥೆಗಳ ಮೂಲಸ್ಥಾನ"ವೆಂಬುದು ಬೆಳಗಾಂವಿಯ ಕಥಾಕುಂಜದಲ್ಲಿ ಪ್ರಕಟವಾದ ಒಂದು ಸಂಗ್ರಹಾನುವಾದ. "ಮಕ್ಕಳ ಸಾಹಿತ್ಯ"ವೆಂಬುದು ಮಂಗಳೂರಿನ ನವಭಾರತ ದೈನಿಕದಲ್ಲಿ ಪ್ರಕಟವಾಗಿತ್ತು. ಮೇಲಿನ ಲೇಖನಗಳನ್ನು ಆಗಾಗ ತಂತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದ ಸಂಪಾದಕರುಗಳಿಗೆಲ್ಲ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

ನೆಹರೂ ಜಯಂತಿ,
14—11—1955.

—ಬರೆದವರು.



೧

# ನಮ್ಮ ಸಾಹಿತ್ಯದ ಸಾಗಾಟ

ನಾಗರಿಕ ದೃಷ್ಟಿಯಲ್ಲಿ ಸೃಷ್ಟಿ ಎಲ್ಲಾ ಕಾಡಾಗಿದ್ದಾಗ—ಕಾಡು ್ರಾಣಿಗಳದೇ ನಾಡಾಗಿದ್ದಾಗ— ಮನುಷ್ಯಜೀವಿ ಹುಟ್ಟಿಕೊಂಡು ಾಡುಮೇಡುಗಳಲ್ಲಿ ಗುಹೆಗಹ್ವರಗಳಲ್ಲಿ ವಾಸಿಸತೊಡಗಿದ. ಹಾಗೆ ಾಳುವೆ ತೊಡಗಿದ ಮನುಷ್ಯಜೀವಿ ಒಂದು ಬಗೆಯಲ್ಲಿ ಎರಡು ಾಲಿನ ಪ್ರಾಣಿಯೇ ಆಗಿದ್ದನೆನ್ನಬಹುದು. ಈ ಎರಡು ಕಾಲಿನ ುನುಷ್ಯ ಪ್ರಾಣಿಯಲ್ಲಿದ್ದ ಒಂದೇ ಒಂದು ವಿಶೇಷವೆಂದರೆ ಮೆದುಳು; ಮೇಲೆ ಭಾಷೆ.

ಪ್ರಾರಂಭದಲ್ಲಿ ಮನುಷ್ಯರು ಬೇಟೆಯಾಡಿಯೇ ಜೀವಿಸುತ್ತಿ ್ದರು; ಬೇಟೆಯ ಸಾಧನವಾಗಿ ಕಲ್ಲುಗೆಲ್ಲುಗಳನ್ನು ಉಪಯೋಗಿ ುತ್ತಿದ್ದರು. ಇವರು ಆಹಾರ ಸಂಪಾದನೆಗಾಗಿಯೂ, ವೈರಿಗಳ ್ದುರಿಸುವುದಕ್ಕಾಗಿಯೂ ಕೈಗಳನ್ನೇ ಉಪಯೋಗಿಸುತ್ತಿದ್ದಾಗ ರನಾಡಿಗಳಿಗೆ ವ್ಯಾಯಾಮ ದೊರೆತು ಮೆದುಳಿನ ಬೆಳವಣಿಗೆಗೆ ಹಾಯವಾಯಿತೆಂದು ವಿದ್ವಾಂಸರ ಅಭಿಪ್ರಾಯ. ಪ್ರಕೃತಿ ೊಂದಿಗೆ ಕಲಬೆರಕೆಯಾಗಿ ಗುಂಪುಕಟ್ಟಿಕೊಂಡು ಬೆಳೆಯುತ್ತಿದ್ದ ುನುಷ್ಯರ ಮೆದುಳು ಬೆಳೆದಂತೆ, ಮನಸ್ಸು ವಿಶಾಲಗೊಂಡಂತೆ, ಿಸಿಲು ಮಳೆಗಳಿಂದ ತಮಗಾದ ಅನುಭವವನ್ನು—ಸುಂದರವಾದ ಸ್ತುವನ್ನು ಕಂಡಾಗ, ಕಲಕಲನೆ ಹರಿಯುವ ಹಳ್ಳದ ಕಲದನಿ ೇಳಿಸಿದಾಗ, ಗಾಳಿ ಸುಯ್ಯನೆ ಬೀಸಿದಾಗ, ಜೇನುನೊಣಗಳ ಝೇಂಕಾರವನ್ನಾಲಿಸಿದಾಗ ಉಂಟಾದ ಆನಂದವನ್ನು—ಅನುಭವ ನ್ನು—ಗುಡುಗುಮಿಂಚುಗಳನ್ನು ಕೇಳಿಕೊಂಡಾಗ ಹುಟ್ಟಿದ ಭಯ

ಆಶ್ಚರ್ಯಗಳನ್ನು ಮನಸ್ಸಿನಿಂದ ಹೊರಗೆಡಹಬೇಕಾಗಿ ಬಂದ
ಭಾಷೆ ಹುಟ್ಟಿಕೊಂಡಿತು; ಹಾಗೆ ಹುಟ್ಟಿಕೊಂಡ ಭಾಷೆ ಅನುಕರಣ
ದಿಂದ ಬೆಳೆಯಿತು.

ಪ್ರಕೃತಿಯೊಂದಿಗೆ ಬೆರೆತಿದ್ದ ಮನುಷ್ಯನಲ್ಲಿ ಪ್ರಕೃತಿಯು
ಉಂಟಾಗುತ್ತಿದ್ದ ಪರಿವರ್ತನೆಗಳ ಪ್ರಭಾವ ಬಿದ್ದೇ ಬೀಳುತ್ತಿತ್ತು
ಇದರಿಂದ ಅವನ ಭಾವನೆಯಲ್ಲಿ ಮಾರ್ಪಾಟವಾಗುತ್ತ ಬಂದಿತು
ಮನುಷ್ಯನ ಸುಖದುಃಖಗಳ ಅನುಭವವೇ ಕವಿತೆಯ ಹುಟ್ಟಿಗೆ
ಕಾರಣವಾಯಿತು. ಇಲ್ಲಿ ನಾವು ಪರಂಪರೆಯಿಂದ ಬಂದ ರಾಮಾ
ಯಣದ ಹುಟ್ಟಿನ ಕತೆಯನ್ನು ದೃಷ್ಟಾಂತವಾಗಿ ತೆಗೆದುಕೊಳ್ಳ
ಬಹುದು. ಗಾನಮಯವಾದ ಪ್ರಕೃತಿಯೊಡನೆ ಬೆಳೆದ ಮನುಷ್ಯ
ನಲ್ಲಿ ಸಂಗೀತ ಸಮಾವೇಶಗೊಂಡುದರಲ್ಲಿ ಸೋಜಿಗವೇನೂ ಇಲ್ಲ
ಚಳಿಗಾಲದಲ್ಲಿ ಬೆಂಕಿಯ ಬಳಿ ಕುಳಿತು ಬೆಂಕಿ ಕಾಯಿಸುತ್ತಿದ್ದ
ಮನುಷ್ಯ ಜೀವಿಯ ಬಾಯಿಂದ "ಅಗ್ನ ಆಯಾಹಿವೀತಯೇ........
ಎಂದು ಅಗ್ನಿಯನ್ನು ಹೊಗಳುವ ಮಾತು ರಾಗವಾಗಿ ಹೊರಟಿತು
ಮಂತ್ರವಾಯಿತು. ಕಾಲ ಕಳೆದಂತೆ ಬಿಡಿ ಮಾತುಗಳು ಒಂದೆ
ಸೇರಿ ಗದ್ಯವಾಯಿತು. ರಾಗದಿಂದ ತಾಳಕ್ಕೆ ಸರಿಯಾಗಿ ಹಾಡಲ
ಬರುವ ಮಾತುಗಳೇ ಪದ್ಯವಾಯಿತು.

ಆದಿ ಮಾನವರ ಜೀವನ ವೈಯುಕ್ತಿಕವಾಗಿಲ್ಲದೆ ಸಾಮೂಹಿಕ
ವಾಗಿಯೇ ಇದ್ದಿತು. ಅಲ್ಲಿ ವರ್ಗಭೇದಕ್ಕೆ ಎಡೆಯಿರಲಿಲ್ಲವೆಂಬುದ
ಋಗ್ವೇದದ ಅತಿ ಪುರಾತನ ಮಂತ್ರಗಳಿಂದ ವ್ಯಕ್ತವಾಗುತ್ತದೆ
ಋಗ್ವೇದದ ಕಾಲದಲ್ಲಿ ಸಮಾಜ ಜೀವಿಯಾಗಿದ್ದ ಮನುಷ್ಯ ಮುಂದ
ಕಾಲಕಳೆದಂತೆ ವರ್ಗಜೀವಿಯಾಗತೊಡಗಿದ ಎಂಬುದಕ್ಕೆ ಋಗ್ವೇ
ದದ ದ್ವೈತ ದೇವತೆಗಳೇ ಸಾಕ್ಷಿ. ಋಗ್ವೇದದ ಕಾಲಕ್ಕೆ ಮೊದಲೇ
ನಾಗರಿಕತೆಯ ಶಿಖರವನ್ನೇರಿತೆಂದು ವಿದ್ವಾಂಸರು ಹೇಳುವ ಹರಪ್ಪಾ

ೂಹೆಂಜೋದಾರೋಗಳ ಗ್ರಂಥ ಸಾಹಿತ್ಯ ನಮಗಿನ್ನೂ ದೊರೆತಿಲ್ಲ.
ಸಾಹಿತ್ಯ ದೊರೆತರೆ ನಮ್ಮ ಎಷ್ಟೋ ಅಭಿಪ್ರಾಯಗಳು ಅಡಿಮೇ
ಾಗಬಹುದು.

ಋಗ್ವೇದದ ಆರಂಭದ ದೇವತೆಗಳೂ ಅಂದಿನ ಮಾನವರಂತೆ
ುೇ ಸಮಾಜ ಜೀವಿಗಳಾಗಿದ್ದರು. ಆರಂಭಕಾಲದ ವಿಶ್ವಕರ್ಮ
ಾರ್ಮಿಕ ದೇವತೆ) ಮುಂತಾದ ದೇವತೆಗಳಿಗೆ ಮುಂದೆ ಮಾನವ
ೀವನದಲ್ಲಿ ವರ್ಗಭೇದ ಉಂಟಾದಾಗ ಸಮಾಜದಲ್ಲಿ ಸ್ಥಾನದೊರ
ದೆ, ಬುದ್ಧಿಜೀವಿಗಳಾದ ರುದ್ರ ವಿಷ್ಣುಗಳಿಗೆ ಸರ್ವಾಧಿಕಾರ ದೊರ
ತು. ಇದು ಸಮಾಜ ಜೀವನದಲ್ಲಿ ವರ್ಗಭೇದವುಂಟಾಗಿ ಕಾರ್ಮಿ
ರ ಗುಂಪು ಕೀಳೆಂಬ ಭಾವನೆಯೂ, ಬುದ್ಧಿಜೀವಿಗಳೇ ಮೇಲೆಂಬ
ಾವನೆಯೂ ತಲೆದೋರಿದ ಕಾಲ. ಆದರೂ ವೇದಗಳ ಆರಂಭ
ಾಲದ ಅನಂತರ ಮಧ್ಯಕಾಲದಲ್ಲಿ ಬುದ್ಧಿಜೀವಿಗಳ ಮತ್ತು ಶ್ರಮ
ೀವಿಗಳ ಮಧ್ಯೆ ಅಷ್ಟೊಂದು ಭೇದ ಬೆಳೆದು ಬಂದುದು ಕಾಣುವು
ಲ್ಲ. ಆದರೆ ಕಾಲ ಮುಂದುವರಿದಂತೆ ಭೇದಭಾವ ಹೆಚ್ಚಿತು.
ರ್ರಹ್ಮಣರ ಸರ್ವಾಧಿಕಾರವನ್ನು ಒಂದು ರೀತಿಯಲ್ಲಿ ಕ್ಷತ್ರಿಯರು
ರೋಧಿಸಿದರು. ಇದಕ್ಕೆ ಜನಕಾದಿ ಬ್ರಹ್ಮವಾದಿಗಳೇ ಸಾಕ್ಷಿ.
ುಂದೆ ಭಗವದ್ಗೀತೆಯಂತಹ ಕೃತಿಗೆ ಕರ್ತೃವಾದವನೂ ಕ್ಷತ್ರಿಯ
ಷ್ಣನೇ.

ಮುಂದೆ ಗೌತಮ ಬುದ್ಧನ ಕಾಲಕ್ಕನುವಾಗಿ ಸಾಹಿತ್ಯದಲ್ಲಿ
ರಂತಿ ತಲೆದೋರಿತು. ಬುದ್ಧಗುರು ತನ್ನ ಸಾಹಿತ್ಯವನ್ನೆಲ್ಲ ಜನ
ಯ ಭಾಷೆಯಾದ ಪ್ರಾಕೃತದಲ್ಲಿ ಪಾಲಿಭಾಷೆಯಲ್ಲಿ ಬರೆಯಿಸಿದ.
ದ್ಧಸಾಹಿತ್ಯ ಆ ಕಾಲದ ಸಂಸ್ಕೃತ ಸಾಹಿತ್ಯಕ್ಕಿಂತ ಪ್ರಗತಿಪಥ
ಲ್ಲಿ ಹರಿದಿತ್ತೆಂದು ಧಾರಾಳವಾಗಿ ಹೇಳಬಹುದು. ಬಲ್ಲವರ
ಾತ್ತಾಗಿದ್ದು ಶ್ರಮಜೀವಿಗಳನ್ನೂ ಅಜ್ಞಾನಿಗಳನ್ನೂ ತಗ್ಗಿಸಿಡಲು

ಸಹಾಯಕವಾಗಿದ್ದ ಸಂಸ್ಕೃತ ಸಾಹಿತ್ಯಕ್ಕೆ ಬೌದ್ಧ ಸಾಹಿತ್ಯದಿಂದ ತುಂಬಾ ಆಘಾತವಾಗಿರಬೇಕು. ಬೌದ್ಧಯುಗಕ್ಕಿಂತ ಎಷ್ಟೋ ಶತಮಾನಗಳ ಹಿಂದಿನದಾದ ಮೊಹೆಂಜೋದಾರೋದ ಸಂಸ್ಕೃತಿ ದ್ರಾವಿಡರದೆಂದಾದರೆ ಆ ಕಾಲದ ದ್ರಾವಿಡ ಭಾಷೆಯಲ್ಲಿ ಸಾಹಿತ್ಯ ನಿರ್ಮಾಣವಾಗಿರಲೇ ಬೇಕು. ಕ್ರಿಸ್ತಪೂರ್ವ ಶತಮಾನಗಳ ಯಾವ ದ್ರಾವಿಡಭಾಷಾಗ್ರಂಥಗಳೂ ನಮಗೆ ದೊರೆತಿಲ್ಲವಾದರೂ ಕ್ರಿಸ್ತ ಶಕದ ಆರಂಭದಿಂದ ತಮಿಳು ಸಾಹಿತ್ಯ ಉನ್ನತಿಗೇರುತ್ತ ಬಂದಿದೆ ಎಂಬುದನ್ನು ತೋರಿಸಿಕೊಡುವಂತಹ ಕೃತಿ ದೊರಕಿರುತ್ತದೆ. ಕ್ರಿ. ಶ. ಎರಡನೆಯ ಶತಕಕ್ಕೆ ಸೇರಿದ 'ಶಿಲಪ್ಪದಿಕಾರ'ವೇ ಇದಕ್ಕೆ ಸಾಕ್ಷಿ. ಈ ಗ್ರಂಥದಲ್ಲಿ ಬೌದ್ಧ, ಜೈನ, ಬ್ರಾಹ್ಮಣ ಮೊದಲಾದ ಧರ್ಮಗಳ ನಿರೂಪಣೆ ತೋರುವುದರಿಂದ ಆ ಕಾಲಕ್ಕೆ ಮೊದಲೇ ಉತ್ತರದ ಬೌದ್ಧ ಜೈನ ಧರ್ಮಗಳು ತೆಂಕಣ ತಮಿಳಿಗೂ ಇಳಿದು ಬಂದಿವೆ ಎಂದಾಯಿತಷ್ಟೆ? ತೆಂಕಣ ತಮಿಳಿಗೆ ಈ ಧರ್ಮಗಳು ಇಳಿತರಬೇಕಾದರೆ ಅವು ಕನ್ನಡ ತೆಲುಗುಗಳನ್ನು ದಾಟಿಯೇ ಬರಬೇಕಷ್ಟೆ? 'ಶಿಲಿಪ್ಪದಿಕಾರ'ದ ವಿಷಯವಿವರಣೆ ಭಾಷಾಸಂಪತ್ತುಗಳನ್ನು ನೋಡಿದರೆ ಆ ಕೃತಿ ಅಂದಿನ ಜನತೆಯ ಪರಮಪ್ರಿಯ ಕಾವ್ಯವಾಗಿದ್ದಿರಬೇಕೆಂದು ಊಹಿಸಬಹುದಾಗಿದೆ. ಸಾಹಿತ್ಯದಲ್ಲಿ ಪ್ರಗತಿ ಎಂಬುದಕ್ಕೆ ಇದಕ್ಕಿಂತ ಉತ್ತಮವಾದ ಉದಾಹರಣೆ ಇನ್ನೆಲ್ಲಿ ಸಿಗಬೇಕು?

ಇನ್ನು ನಮ್ಮ ಕನ್ನಡದ ಕಾವ್ಯಧಾರೆ—ಸಾಹಿತ್ಯವಾಹಿನಿ—ಹೇಗೆ ಹರಿದು ಬಂದಿತೆಂದು ನೋಡುವ. ರಾಮಾಯಣ ಮಹಾಭಾರತಗಳಲ್ಲಿ, ಶಿಲಪ್ಪದಿಕಾರದಲ್ಲಿ ಕನ್ನಡದ ಮಾತು ಬಂದಿದೆ. ಅಶೋಕನ ಶಾಸನಗಳು ಕರ್ಣಾಟಕದಲ್ಲಿ ದೊರೆತುದರಿಂದ ಮತ್ತು ಇನ್ನೂ ಹಲವು ಆಧಾರಗಳಿಂದ ಕರ್ಣಾಟಕದಲ್ಲಿ ಬೌದ್ಧರಿದ್ದುದು ಖಂಡಿತವಾದರೂ ಕನ್ನಡದ ಬೌದ್ಧ ಸಾಹಿತ್ಯ ನಮಗಿನ್ನೂ ದೊರೆತಿಲ್ಲ;

ದೊರಕುವ ಹಾಗೂ ಇಲ್ಲ. ನಮಗೆ ಕನ್ನಡ ಭಾಷೆಯ ಪ್ರತ್ಯಕ್ಷ ಪರಿಚಯವಾಗುವುದು ಎರಡನೆಯ ಅಥವಾ ಮೂರನೆಯ ಶತಮಾನದ್ದಾಗಿರಬಹುದಾದ ಅದೊಂದು ಗ್ರೀಕ್ ಪ್ರಹಸನದಲ್ಲಿ. ಗ್ರೀಕ್ ಪ್ರಹಸನದಲ್ಲಿ ಕನ್ನಡದ ಮಾತು ಸೇರಬೇಕಾದರೆ ಆ ಕಾಲಕ್ಕೆ ಕನ್ನಡ ತಕ್ಕಷ್ಟು ಪ್ರೌಢಾವಸ್ಥೆಗೆ ತಲಪಿರಬೇಕೆಂಬುದು ನಿರ್ವಿವಾದ. ಅಲ್ಲದೆ ಆ ಪ್ರಹಸನವು ಸಾಮಾಜಿಕವಾಗಿರುವುದೂ ಒಂದು ವಿಶೇಷ. ಮುಂದೆ ಮೂರನೆಯ ಕನ್ನಡ ಬರೆಹ ಹಲ್ಮಿಡಿಯ ಶಾಸನ. ಈ ಶಾಸನದ ಭಾಷೆ ಆ ಕಾಲದ ಜನರಾಡುವ ನುಡಿಯಾದರೂ, ರಾಜರು ಬರೆಸಿದ ಶಾಸನವಾದುದರಿಂದ ಹಲಕೆಲವು ಸಂಸ್ಕೃತ ಪದಗಳೂ ಸೇರಿಕೊಂಡಿವೆ. ಇದರಿಂದ ಆ ಕಾಲಕ್ಕೆ ಮೊದಲೇ ಕನ್ನಡದ ಮನೆಯಲ್ಲಿ ಸಂಸ್ಕೃತ ನೆಲೆಮಾಡಿದ್ದಿತೆಂಬುದು ಸ್ಪಷ್ಟ. ಈ ಶಾಸನವು ಗದ್ಯದಲ್ಲಿರುವುದು ಇನ್ನೊಂದು ವಿಶೇಷ.

ಆರನೆಯ ಶತಕದ್ದಾಗಿರಬಹುದಾದ 'ವಡ್ಡಾರಾಧನೆ' ಎಂಬ ಅನುವಾದಿತ ಗದ್ಯ ಕತೆಗಳ ಸಂಗ್ರಹ ನಮಗೆ ದೊರಕಿದ ಅತ್ಯಂತ ಪ್ರಾಚೀನ ಗದ್ಯ ಕೃತಿಯಾಗಿದೆ. ಇದು ಜೈನ ಧರ್ಮದ ಕಥಾ ಸಂಗ್ರಹ. 'ವಡ್ಡಾರಾಧನೆ'ಯ ಭಾಷೆ, ಕಥಾನಿರೂಪಣೆ, ಜನ ಜೀವನದ ಚಿತ್ರ ಮೊದಲಾದುವನ್ನು ಪರಿಶೀಲಿಸಿದರೆ ಅಂದಿನ ಸಾಹಿತ್ಯದ ಅದೊಂದು ದೇಶೀಯ ಪದ್ಧತಿ, ಜನತೆಯಿಂದ ದೂರವಾದ ಮಾರ್ಗಕ್ಕೆ—ಪಂಡಿತ ಶಾಸ್ತ್ರಿಗಳ ಏಕತಂತ್ರಾಧಿಕಾರಕ್ಕೆ—ಒಳಗಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಏಳನೆಯ ಶತಮಾನದ್ದೆಂದು ನಿರ್ಣೀತವಾದ ಕಪ್ಪೆ ಅರಭಟ್ಟನ ಕುರಿತಾದ ಶಾಸನವು ತ್ರಿಪದಿಯ ರೂಪದಲ್ಲಿದೆ. ತ್ರಿಪದಿ ಛಂದಸ್ಸು ಶುದ್ಧ ದೇಶೀಯ ಪದ್ಧತಿ—ಜನಪದ್ಧತಿ. ಇದರಿಂದೆಲ್ಲ ಏಳನೆಯ ಶತಮಾನದ ವರೆಗೂ ನಮ್ಮ ಸಾಹಿತ್ಯ ಜನತೆಯನ್ನು ಬಿಟ್ಟು ಪ್ರತ್ಯೇಕವಾದ ದಾರಿ

ಹಿಡಿಯಲಿಲ್ಲವೆಂದು ಹೇಳಲು ಯಾವ ಆತಂಕವೂ ತೋರು ವುದಿಲ್ಲ.

ಮುಂದೆ ನೃಪತುಂಗನ ಹೆಸರಿನಲ್ಲಿ 'ಕವಿರಾಜಮಾರ್ಗ' ರಚಿತ ವಾಗಿ ಕವಿಗಳಿಗೆ ರಾಜಮಾರ್ಗದ ನಿಯಮ ಹಾಕಿತು. ಕವಿರಾಜ ಮಾರ್ಗದ ಕಾಲದ ತನಕವೂ ಜನತೆಯದೇ ಆದ ದೇಶೀಯ ಸಾಹಿತ್ಯ ಪ್ರಗತಿಪಥದಲ್ಲಿ ಸಾಗಿ ಬಂದಿತ್ತೆಂಬುದಕ್ಕೆ ಕವಿರಾಜಮಾರ್ಗ ದಲ್ಲಿ ಹಲವು ದೃಷ್ಟಾಂತಗಳು ಸಿಗುತ್ತವೆ. ನೃಪತುಂಗನು ತನ್ನ ಜೀವನದ ಆರಂಭದಲ್ಲಿ ಹಲವು ಹೋರಾಟಗಳಲ್ಲಿ ಹೋರಾಡಿ ರಾಜ್ಯ ದಲ್ಲಿ ನೆಮ್ಮದಿ ನೆಲಸಿದ ಮೇಲೆ ನಾಡಿನ ಸಾಹಿತ್ಯದ ಕಡೆಗೆ ಗಮನ ವಿತ್ತನು. ಕನ್ನಡದ ಜನತೆಯನ್ನು—ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳನ್ನು—ತನ್ನ ಆಸ್ಥಾನಕ್ಕೆ ಬರಿಸಿದನು. ಜನತೆಯ ಜೀವನದಲ್ಲಿ ಬೆರೆತುಕೊಂಡು ಕಾಲ ತಿರುಗಿದಂತೆಯೇ ಗತಿ ಬದಲಾಯಿಸುತ್ತ ಬರುತ್ತಿದ್ದ ದೇಶೀಯ ಸಾಹಿತ್ಯಕ್ಕೆ ಆದೊಂದು ರಾಜಮಾರ್ಗವನ್ನು ತೋರಿಸಬಯಸಿದನು. ಈ ಕಾರ್ಯಕ್ಕೆ ಸಂಸ್ಕೃತದ ಅಲಂಕಾರ ಶಾಸ್ತ್ರಗಳನ್ನೋದಿದ ಆಸ್ಥಾನ ಪಂಡಿತರೂ, ಸಂಸ್ಕೃತದ ಸಂಸ್ಕೃತಿಯಿಂದ ಸಂಸ್ಕೃತರಾದ ಶಾಸ್ತ್ರಿಗಳೂ ನೆರವಾ ದರು. ಆ ಕಾಲಕ್ಕಿಂತ ಎಷ್ಟೋ ಶತಕಗಳ ಮೊದಲೇ ಕನ್ನಡದ ಜನಜೀವನದಲ್ಲಿ ವರ್ಗಭೇದ ಉಂಟಾಗಿ ಬಡವ ಬಲ್ಲಿದ, ಪಂಡಿತ ಪಾಮರ, ಆಳು ಅರಸು ಎಂದು ಮುಂತಾದ ಭೇದ ತಲೆದೋರಿದ್ದರೂ ಸಾಹಿತ್ಯದಲ್ಲಿ ಯಾವ ವರ್ಗಭೇದಕ್ಕೂ, ಏಕತಂತ್ರಾಧಿಕಾರಕ್ಕೂ ಎಡೆ ಇರಲಿಲ್ಲವೆಂಬುದಾಗಿ ತೋರುತ್ತದೆ.

ಕವಿರಾಜ ಮಾರ್ಗದಲ್ಲಿ ಕನ್ನಡದ ಜನತೆಯ ಕುರಿತಾಗಿ "ಪದ ನರಿದು ನುಡಿಯಲುಂ, ನುಡಿದುದನರಿದಾರಯಲುಂ ಆರ್ಪರಾ ನಾಡವರ್ಗಳ್; ನಿಜದಿಂ ಕುರಿತೋದದೆಯುಂ ಕಾವ್ಯಪ್ರಯೋಗ

ಪರಿಣತ ಮತಿಗಳ್" ಎಂಬುದೊಂದು ಪದ್ಯವಿದೆಯಷ್ಟೆ? ಇದರಿಂದ ಆ ಕಾಲದ ಕನ್ನಡದ ಜನ ಕಾವ್ಯಪ್ರಯೋಗಪರಿಣತಮತಿಗಳಾಗಿದ್ದ ರೆಂಬುದು ಸ್ಪಷ್ಟವಾಗುತ್ತಿದೆ. ಅಷ್ಟೇ ಅಲ್ಲ, "ನಾಡವರ್ಗಳ್ ಪದನರಿದು ನುಡಿಯಲುಂ, ನುಡಿದುದನರಿದಾರಯಲುಂ ಆರ್ಪರ್" ಎಂಬುದ ರಿಂದ ನಾಡವರು ಸಾಹಿತ್ಯರಚನೆವಿಮರ್ಶೆಗಳೆರಡರಲ್ಲಿಯೂ ಸಿದ್ಧ ಹಸ್ತರೆಂದಾಯಿತು. ಅದಲ್ಲದೆ "ಕನ್ನಡಕ್ಕೆ ನಾಡವರ್ ಒವಜರ್" "ಕನ್ನಡಂಗಳೊಳ್ ದೇಶಿ ಬೇರೆಬೇರಪ್ಪುದರಿಂ ವಾಸುಗಿಯುಂ ಅರಿಯ ಲಾರದೆ ಬೇಸರುಗುಂ" ಎಂಬುದರ ತಾತ್ಪರ್ಯವಾದರೂ ಏನು? ಅಂದಿನ ಕನ್ನಡ ಸ್ವತಂತ್ರವಾಗಿತ್ತು, ಕನ್ನಡಿಗರು ಯಾವ ಕಟ್ಟು ನಿಟ್ಟುಗಳೂ ಇಲ್ಲದೆ ಸಾಹಿತ್ಯನಿರ್ಮಾಣವೆಸಗುತ್ತಿದ್ದರು. ಕನ್ನಡದ ಸಾಹಿತ್ಯವಾಹಿನಿ ಕೃಷ್ಣಾಕಾವೇರಿಗಳಂತೆ ಸ್ವತಂತ್ರವಾಗಿ ಹರಿಯು ತ್ತಿದ್ದುದೇ ವಿನಾ ಕಾಲುವೆ ಕಡಿದು ಹರಿಯಿಸಿದ ಹೊನಲಿನಂತೆ ಅದೊಂದು ಮಟ್ಟದಲ್ಲಿ ಹರಿಯುತ್ತಿದ್ದಿಲ್ಲ—ಎಂಬುದು ನಿಶ್ಚಿತವಾಗು ವುದು. ಅಂದಿನ ನಮ್ಮ ಸಾಹಿತ್ಯ ಶ್ರಮಜೀವಿಗಳ ಜೀವನದಂತೆ ಸುಖದುಃಖಗಳಿಂದ ಕೂಡಿ ಪರಿಸ್ಥಿತಿಗೆ ತಕ್ಕಂತೆ ಬೆಳೆದು ಬಂದಿತಲ್ಲದೆ ಅಲಂಕಾರದ ನಿರ್ಬಂಧ, ವ್ಯಾಕರಣದ ನಿಯಮ ಮೊದಲಾದ ಬಂಧನಗಳಿಂದ ಬಂಧಿತವಾಗಿರಲಿಲ್ಲ.

. ಇನ್ನೊಂದೆಡೆ ಕವಿಗಳಿಗೆ ರಾಜಮಾರ್ಗ ರಚಿಸಿದ ನೃಪತುಂಗ 'ಕನ್ನಡಿಗರು ಆಗಮಬಲಹೀನರು, ಅವರು ಮಾರ್ಗದಲ್ಲಿ ಬರುವುದಿಲ್ಲ' ಎಂದು ಮುಂತಾಗಿ ಆಕ್ಷೇಪಿಸಿ ಕನ್ನಡಿಗರ ಸ್ವತಂತ್ರ ಮನೋವೃತ್ತಿ ಗಾಗಿ ಮರುಗಿದ್ದಾನೆ. 'ಕನ್ನಡಂಗಳ್' ಎಂಬ ಪದದಿಂದ ಅಷ್ಟರವರೆಗೆ ಇದನ್ನು ಹೀಗೆಯೇ ಬರೆಯಬೇಕೆಂಬ ನಿಯಮವಿರಲಿಲ್ಲವೆಂದಾಗುವು ದಷ್ಟೆ? ಇದರಿಂದ ಅಂದಿನ ಕನ್ನಡಸಾಹಿತ್ಯ ಸ್ವತಂತ್ರವಾಗಿ ಜನಜೀ ವನದೊಂದಿಗೆ ಬೆರೆತು ಬೆಳೆಯಲು ಅನುಕೂಲವಾಯಿತು. ನೃಪ

ತುಂಗನು ತನ್ನ ಕಾಲದ ತನಕದ ಕನ್ನಡ ಸಾಹಿತ್ಯದ ಸಿಂಹಾವ
ಲೋಕನವೆಸಗಿ, ಕನ್ನಡ ಸಾಹಿತ್ಯದ ಸ್ವಾತಂತ್ರ್ಯವನ್ನು ರಾಜ
ಮಾರ್ಗಕ್ಕೆಳೆದು, ಜನತೆಯುದಾಗಿದ್ದ ಕನ್ನಡವನ್ನು ಏಕತಂತ್ರಾಧಿ
ಕಾರಕ್ಕೆ ಒಳಪಡಿಸಿದನೆಂದು ಹೇಳಿದರೆ ತಪ್ಪಾದೀತೆ?

ನೃಪತುಂಗನ ಕವಿರಾಜಮಾರ್ಗ ನಿರ್ಮಾಣವಾದ ಮೇಲೆಯೇ
ಕನ್ನಡ ಸಾಹಿತ್ಯದಲ್ಲಿ ಏಕತಂತ್ರಾಧಿಕಾರ ಬಲಗೊಂಡಿತು. ಪ್ರಾಕೃತ
ಸಂಸ್ಕೃತಗಳಲ್ಲಿ ಬಲ್ಲಿದರಾದ ಜೈನರು ಉತ್ತರದಿಂದ ದಕ್ಷಿಣಕ್ಕಿಳಿದು
ಬಂದು ಸಾಮಾನ್ಯ ಜನತೆಯ ಕಡೆಗೆ ಬೆನ್ನಿಕ್ಕಿ ರಾಜಾಸ್ಥಾನಗಳನ್ನು
ಪ್ರವೇಶಿಸಿ, ರಾಜಮಹಾರಾಜರ ಪ್ರಶಂಸೆಗಾಗಿ ಕಾವ್ಯ ರಚಿಸಿ ಸಾ
ಮ್ರಾಜ್ಯವಾದಕ್ಕೆ ನೆರವಾದರು. ಕವಿರಾಜಮಾರ್ಗದ ನಿಯಮ
ದಲ್ಲಿಯೇ ಅಡಿಯಿರಿಸಿ ನಡೆದ ಪಂಪರನ್ನಾದಿಗಳ ಕೃತಿಗಳು ಆ
ಕಾಲದ ಜನತೆಯಿಂದ ಎಷ್ಟೋ ದೂರಕ್ಕೆ ಸರಿದುನಿಂತುವು. ಈ
ಕೃತಿಗಳಿಗೆ ರಾಜಾಸ್ಥಾನಗಳ ಹಿಂಬಾಲಕರಾದ ಮಠಾಧಿಪತಿಗಳ
ಮಠಗಳಲ್ಲಿ ಮಾತ್ರ ಆಶ್ರಯ ದೊರಕಿತು. ಅವು ಬೀದಿವರಿದು
ಬೀರನ ಕತೆಗಳಾಗಲಿಲ್ಲ.

ಬಲ್ಲಿದರೆನ್ನುವ ಜನ ಜನಸಾಮಾನ್ಯದ ಕಡೆಗೆ ಬೆನ್ನಿಕ್ಕಿದರೂ
ಜನತೆಯೇನೂ ಸುಮ್ಮನೆ ಕುಳಿತಿರಲಿಲ್ಲ. ಜನತೆಯ ಸುಖದುಃಖ
ರೀತಿನೀತಿಗಳನ್ನು ಚಿತ್ರಿಸುವುದಕ್ಕೆ 'ಬೆದಂಡೆ' 'ಚತ್ತಾಣ'ಗಳಿದ್ದುವು;
ಹರಿಕತೆ, ಶಿವಕತೆಗಳಿದ್ದುವು. ಎಲ್ಲಕ್ಕಿಂತ ಮಿಗಿಲಾಗಿ ವೇಷಕಟ್ಟಿ
ಹಾಡಿ ಕುಣಿಯುವ ಯಕ್ಷಗಾನವಿದ್ದಿತು. ಹೀಗೆ ಮಾರ್ಗಸಾಹಿತ್ಯ
ಅದೊಂದು ತೆರನಾಗಿ ಸಾಗಿದ್ದರೆ, ಜನತಾಸಾಹಿತ್ಯ ತನ್ನದೇ ದಾರಿ
ಯಲ್ಲಿ ಮುಂದೊತ್ತುತ್ತಿತ್ತು.

ಈ ಕಾಲದಲ್ಲಿ ನಾಟಕಗಳು ಹುಟ್ಟದಿರಲಿಕ್ಕೆ ಸಾಹಿತ್ಯದಲ್ಲುಂ
ಟಾದ ವರ್ಗಭೇದವೇ ಕಾರಣವಾಗಿರಲೂ ಬಹುದು. ನಾಟಕ

ವೆಂದರೆ ಸುಶಿಕ್ಷಿತರಿಗೂ ಅಶಿಕ್ಷಿತರಿಗೂ ಒಪ್ಪುವ ಸಾಹಿತ್ಯಪ್ರಕಾರ. ರಾಜಮಾರ್ಗದಲ್ಲಿ ನಡೆಯುವ ಕವಿಗಳು ಜನತೆಯ ಕಾಲ್ದಾರಿಯಲ್ಲಿ ನಡೆಯಲಾರದವರಾದ ಕಾರಣ ನಾಟಕಗಳ ರಚನೆಗೆ ಕೈಯಿಕ್ಕದೆ ಕುಳಿತಿರಲೂ ಬಹುದು. ಇದರಿಂದ ಜನತೆಗೇನೂ ಕೆಡುಕೆನಿಸಲಿಲ್ಲ. ಜನತೆಯು ತನ್ನದೇ ಆದ ಜನತಾಸಾಹಿತ್ಯವನ್ನು ಕಟ್ಟಿಕೊಂಡು ಮುಂದುವರಿಯಿತು.

ನೃಪತುಂಗನ ಕಾಲದಿಂದ ಎಂದರೆ ಒಂಬತ್ತನೆಯ ಶತಮಾನ ದಿಂದ ಬಸವೇಶ್ವರರ ಕಾಲದ ವರೆಗೆ ಪಂಪ ಪೊನ್ನ ರನ್ನರು ಮಾರ್ಗ ಸಾಹಿತ್ಯವನ್ನು—ಸಾಮ್ರಾಜ್ಯವಾದೀ ಬಲ್ಲಿದರ ಸಾಹಿತ್ಯವನ್ನು ಕಟ್ಟಿ ಬೆಳೆಸಿ ರಾಜಾಸ್ಥಾನಗಳಲ್ಲಿ ಮೆರೆದರು. ಇವರಿಗೆ ರಾಜಾಸ್ಥಾನದಲ್ಲಿ ಮಾತ್ರ ಮನ್ನಣೆ ದೊರಕಿರಬಹುದೇ ವಿನಾ ಜನತೆಯಿಂದ ಯಾವ ತೆರದ ಮೆಚ್ಚುಗೆಯೂ ದೊರಕಿರಲಾರದು.

ಬಸವೇಶ್ವರರ ಕಾಲಕ್ಕಾಗುವಾಗ ನಮ್ಮ ಸಾಹಿತ್ಯ ಅಲಂಕಾರ ವ್ಯಾಕರಣಗಳ ಮುಳ್ಳು ಬೇಲಿಯೊಳಗೆ ಮುರುಟಿಹೋಗಿತ್ತು. ಬಸವೇಶ್ವರರು ಕರ್ಣಾಟಕದ ಧರ್ಮ, ಸಮಾಜ, ಸಾಹಿತ್ಯಗಳಲ್ಲಿ ಕ್ರಾಂತಿಯನ್ನುಂಟುಮಾಡಿದರು. ಮಾರ್ಗ ಸಾಹಿತ್ಯದಲ್ಲಿ ಗದ್ಯಕ್ಕೆ ಸ್ಥಾನವೇ ಇದ್ದಿಲ್ಲವೆಂದರೂ ಹೆಚ್ಚಾಗದು. ಕವಿಗಳಾದರೊ ತಮ್ಮ ಪದ್ಯಕಾವ್ಯಗಳಲ್ಲಿ ಬಳಸಿಕೊಂಡುದು ಸಂಸ್ಕೃತದ ದೀರ್ಘ ಸಮಾಸ ದಿಂದ ತುಂಬಿದ ಅಕ್ಷರವೃತ್ತಗಳನ್ನು. ಅಲಂಕಾರ ವ್ಯಾಕರಣಗಳ ಕಟ್ಟುನಿಟ್ಟುಗಳನ್ನೆಲ್ಲ ಹರಿದೊಗೆದು ಹಾಡಲಿಕ್ಕೆ ಅನುಕೂಲವಾ ದಂತಹ ಹೊಸ ಗದ್ಯಸಾಹಿತ್ಯಕ್ಕೆ ಅಡಿಗಲ್ಲು ಹಾಕಿದವರು ಬಸವೇ ಶ್ವರರು. ಇದರ ಪರಿಣಾಮವಾಗಿ ಕನ್ನಡದ ಮಾರ್ಗಸಾಹಿತಿಗಳೂ ಕೆಲವು ವಿಷಯಗಳಲ್ಲಿ ಜನತೆಯ ಕಡೆಗೆ ತಿರುಗಿ ಜನತೆಗೆ ಅರ್ಥ ವಾಗುವಂತಹ ಭಾಷೆಯನ್ನೇ ಬಳಸಿಕೊಂಡು ನಮ್ಮ ಸಾಹಿತ್ಯ ಕೆಲ

ಪಟ್ಟಿಗೆ ಪ್ರಯೋಜನಕಾರಿಯಾಗುವಂತೆ ಮಾಡಿದರೆನ್ನಬಹುದು
ಇದೇ ದೇಶೀಯ ಸಾಹಿತ್ಯದ ಕಾಲದಲ್ಲಿಯೇ ಹುಟ್ಟಿದ ಜನತೆ
ಮೆಚ್ಚಿದ ಕಾವ್ಯವೆಂದರೆ ನಾರಣಪ್ಪನ ಭಾರತ. ನಾರಣಪ್ಪ ಸಾಮಾನ್ಯ
ಜನತೆಗಾಗಿಯೇ ಬರೆದನೆಂಬುದಕ್ಕೆ ಇಂದಿಗೂ ಆತನ ಕೃತಿ ಸರ್ವ
ಜನಾದರಣೀಯವಾಗಿ ಮೆರೆಯುತ್ತಿರುವುದೇ ದೃಷ್ಟಾಂತ.

ನಮ್ಮ ಸಾಹಿತ್ಯದ ಜನತಾಯುಗದಲ್ಲಿ—ಹನ್ನೆರಡು ಹದಿಮೂ
ರನೆಯ ಶತಮಾನಗಳಲ್ಲಿ—ವಚನ ಷಟ್ಪದಿಗಳ ರೂಪದಲ್ಲಿ ನಮ್ಮ
ಸಾಹಿತ್ಯ ಸಾಗಿತು. ಮುಂದೆ ವಿಜಯನಗರದ ಅಭಿವೃದ್ಧಿಯ ಕಾಲ
ದಲ್ಲಿ ರಾಜಮಹಾರಾಜರಿಂದ, ಸಾಮಂತ ಮಹಾಸಾಮಂತರಿಂದ
ನಮ್ಮ ಸಾಹಿತ್ಯಕ್ಕೆ ಪೋಷಣ ಪ್ರೋತ್ಸಾಹಗಳು ದೊರೆತರೂ
ಅದೊಂದು ಬಗೆಯ ವೈಭವ ಪ್ರದರ್ಶನವಾಗಿತ್ತೇ ಹೊರತು ಅದರಲ್ಲಿ
ಋಜುತ್ವವಿದ್ದಂತೆ ತೋರುವುದಿಲ್ಲ. ವಿಜಯನಗರ ತನ್ನ ಸಾಮ್ರಾಜ್ಯ
ವೈಭವವನ್ನು ಮೆರೆಯಿಸುತ್ತಿದ್ದಾಗ ಒಂದು ಕಡೆ ದಾಸಕೂಟದವರು
ದಾಸಸಾಹಿತ್ಯದ ನಿರ್ಮಾಣವೆಸಗಿದರು. ದಾಸಕೂಟದವರು ಸಾ
ಮ್ರಾಜ್ಯವಾದಿಗಳನ್ನು ಪ್ರತ್ಯಕ್ಷರೂಪದಿಂದ ಎದುರಿಸಲಾರದವರಾಗಿ
ಜನತೆಗೆ "ಈ ಲೋಕ ಅನಿತ್ಯ, ಇಲ್ಲಿ ಸಿಕ್ಕಿದುದರಲ್ಲಿಯೇ ತೃಪ್ತರಾ
ಗಿರಿ; ಇಲ್ಲಿ ಹೇಗಿದ್ದರೂ ಅಲ್ಲಿ (ದೇವರ ಮುಂದೆ) ನಾವೆಲ್ಲರೂ
ಸಮಾನರು" ಎಂದು ಬೋಧಿಸಲು ಪ್ರಾರಂಭಿಸಿದರು.

ವಿಜಯನಗರವು ಸಾಮ್ರಾಜ್ಯಲೋಲುಪತೆಯಿಂದ, ಸುಖಭೋ
ಗಗಳ ಮತ್ತಿನಿಂದ ದೇಹಶ್ರಮ ವಹಿಸುವ ಶಕ್ತಿ ಕಳೆದುಕೊಂಡು
ವೈರಿಗಳನ್ನೆದುರಿಸಲಾರದೆ ನಾಶದ ದಾರಿ ಹಿಡಿಯಿತು. ವಿಜಯ
ನಗರದ ಅಂತ್ಯಕಾಲದಲ್ಲಿ ಜನತೆಯನ್ನೆಚ್ಚರಿಸಿ ಬೋಧಿಸಿ "ನಿಮಗೆ
ಬೇಕಾದ ಸಾಹಿತ್ಯ ನನ್ನಲ್ಲಿದೆ" ಎಂದು ಘಂಟಾಘೋಷವಾಗಿ ಸಾರಿದ
ಕವಿಯೊಬ್ಬ-ಜನಮನ ಮೆಚ್ಚಿದ ಕವಿಯೊಬ್ಬ-ಆಗಿಹೋದ. ಹಿಂದ

ನಗಲಿದ ಗಂಡುಗಜದಂತಿದ್ದ ಈ ಸರ್ವಜ್ಞನನ್ನು ನಮ್ಮ ಮಾರ್ಗ ಸಾಹಿತಿಗಳಲ್ಲಿ ಹಲವರು ಕವಿಯೆಂದು ಒಪ್ಪಿಕೊಳ್ಳಲು ಕೂಡ ಹಿಂಜರಿದರು. ನಿಜ! ಈತನನ್ನು ಮಾರ್ಗಸಾಹಿತಿಗಳು ಕವಿಯೆನ್ನ ಲಾರರು! ಸರ್ವಜ್ಞ ಮಾರ್ಗಲಕ್ಷಣಗಳ ಕಡೆಗೆ ತುಸುವಾದರೂ ಗಮನವೀಯಲಿಲ್ಲ. ಕನ್ನಡದ ಅರಿವಿದ್ದವನ ಮನದಲ್ಲಿ ಸತತ ನೆಲೆನಿಲ್ಲಬಹುದಾದ ತ್ರಿಪದಿ ಛಂದಸ್ಸು, ಮನಸ್ಸಿಗೆ ನಾಟುವ ಉಪ ಮಾನ, ಮನಸ್ಸಿನಿಂದ ಜಾರಿಹೋಗದ ನುಡಿಗಟ್ಟು, ಕಿರಿದರೊಳು ಪಿರಿದುಮರ್ಥಮನರಿಪ ಜಾಣ್ಮೆ-ಇವು ಸರ್ವಜ್ಞನ ಲಕ್ಷಣಗಳಾಗಿದ್ದು ಜನತೆಯ ಮನಮೆಚ್ಚಿತು. ಇದರಿಂದಾಗಿ ಅಂದಿನಿಂದ ಇಂದಿನ ತನಕವೂ ಈ ಕವಿ ಜನತೆಯ ಕವಿಯಾಗಿಯೇ ಉಳಿದಿದ್ದಾನೆ. ಜನತೆಯ ನಾಲಿಗೆಯಲ್ಲಿ ನಲಿಯುತ್ತಿದ್ದಾನೆ. ಸರ್ವಜ್ಞನ ಕಾಲ ದಿಂದ ಟಿಪ್ಪು ಸುಲ್ತಾನನ ಅಂತ್ಯದ ವರೆಗೆ ಮೂರು ಶತಮಾನಗಳ ಕಾಲದಲ್ಲಿ—ಹದಿನೆಂಟನೆಯ ಶತಮಾನದ ವರೆಗೆ ನಮ್ಮ ಸಾಹಿತ್ಯದ ಸಾಗಾಟದಲ್ಲಿ ಯಾವ ಬದಲಾವಣೆಯೂ ತೋರಿಬರುವುದಿಲ್ಲ. ವಿಜಯನಗರದ ನಾಶದ ನೋವೂ, ಲೋಕವು ಅನಿತ್ಯವೆಂಬ ದಾಸ ಬೋಧದ ವಿರಾಗವೂ, ಸಾಹಿತ್ಯದಲ್ಲಿ ಬೇರೂರಿತ್ತು. ಮತ್ತೆ ಮೈಸೂರ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಿರುಮಲಾರ್ಯ ಮೊದಲಾದವರಿಂದ ಗ್ರಂಥರಾಶಿ ನಿರ್ಮಾಣವಾಯಿತು. ಈ ಕಾಲದ ಗ್ರಂಥಸಮುದಾಯ ರಾಜರನ್ನೋ ಪಾಳೆಯಗಾರರನ್ನೋ ಹೊಗಳಿ ಬರೆದು ಹೊಟ್ಟೆಹೊರೆಯುವ ಸಾಧನಗಳೆಂದರೂ ಹೆಚ್ಚಾಗದು. ಹೊಗಳುಭಟ್ಟರ ಕಾರ್ಯವನ್ನಷ್ಟೆ ಈ ಕವಿಗಳು ಕೈಕೊಂಡರು.

ಹದಿನೆಂಟನೆಯ ಶತಮಾನದ ಅಂತ್ಯದಲ್ಲಿ ಶ್ರೀರಂಗಪಟ್ಟಣದ ಯುದ್ಧದಲ್ಲಿ ಟಿಪ್ಪುಸುಲ್ತಾನನು ಮಡಿದಾಗ ಅಳಿದುಳಿದ ಕನ್ನಡದ ನೆಲವನ್ನು ಪರಧರ್ಮೀಯರು ಆಳುತ್ತಿದ್ದರೂ ಜನತೆಯಲ್ಲಿ ತಾವು

ಪರತಂತ್ರರೆಂಬ ಭಾವನೆ ಹುಟ್ಟಿರಲಿಲ್ಲ. ಆದರೆ ಟಿಪ್ಪು ಸುಲ್ತಾನನ ಪತನಾನಂತರ ಇಂಗ್ಲಿಷರ ಆಳಿಕೆ ಬಂದು ಕನ್ನಡ ಜನತೆ ಸಂಪೂರ್ಣವಾಗಿ ಅಸ್ವತಂತ್ರವಾಯಿತು. ಈ ಪರಕೀಯರಾಳ್ವಿಕೆಯ ಪ್ರಭಾವ ಜನತೆಯ ಮೇಲೆ ಬೀಳದಿರಲಿಲ್ಲ. ಸ್ವಾತಂತ್ರ್ಯ ನಾಶದ ಮರುಕ ಎದೆಯುರಿ ಜನತೆಯಲ್ಲಿ ಹುಟ್ಟದಿರಲಿಲ್ಲ. ಸಂಗೊಳ್ಳಿರಾಯನ ಲಾವಣಿ, ಟಿಪ್ಪು ಸುಲ್ತಾನನ ಲಾವಣಿ—ಇವೇ ಮೊದಲಾದುವು ಆಗ ಹುಟ್ಟಿದ ಜನತಾ ಸಾಹಿತ್ಯದ ಒಂದೆರಡು ಕಿಡಿಗಳೆನ್ನಬಹುದು.

ಟಿಪ್ಪು ಸುಲ್ತಾನನ ಅನಂತರ ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಿಂದ ಇಂಗ್ಲಿಷರು ಕರ್ನಾಟಕವನ್ನು ಆಳತೊಡಗಿದಾಗ ಕನ್ನಡದ ಜನಜೀವನದಲ್ಲಿ ಅದೊಂದು ಬಗೆಯ ಮಾರ್ಪಾಟ ಉಂಟಾಯಿತು. ಯಾಂತ್ರಿಕ ಉದ್ಯೋಗ, ಇಂಗ್ಲಿಷ್ ಪದ್ಧತಿಯ ವಿದ್ಯಾಭ್ಯಾಸ, ಇವೆಲ್ಲ ಈ ಮಾರ್ಪಾಟಕ್ಕೆ ಕಾರಣವಾದುವು. ನಮ್ಮ ಸಾಹಿತ್ಯದಲ್ಲಿಯೂ ಆ ಮಾರ್ಪಾಟ ತಲೆದೋರದೆ ಉಳಿಯಲಿಲ್ಲ. ನಮ್ಮ ಸಾಹಿತಿಗಳಲ್ಲಿ - ಮಾರ್ಗ ಸಾಹಿತಿಗಳಲ್ಲಿ - ಹಳೆಯ ಮಾರ್ಗದ ಸಂಸ್ಕೃತ ಕನ್ನಡಗಳ ಪಾಂಡಿತ್ಯ ಪ್ರದರ್ಶಕರದೊಂದು ತಂಡ; ಇಂಗ್ಲಿಷ್ ಭಾಷಾ ಸಾಹಿತ್ಯಗಳಿಂದಲೇ ನಮಗೆ ಮೋಕ್ಷವೆನ್ನುವ ಇಂಗ್ಲಿಷ್ ವಿದ್ಯಾಪಾರಂಗತರದೊಂದು ಗುಂಪು. ಸಂಸ್ಕೃತ ಕನ್ನಡಗಳ ಪಂಡಿತರು ವ್ಯಾಕರಣ ಅಲಂಕಾರಗಳ ತೊಳಲಾಟದಲ್ಲಿ, ಪ್ರಾಸಾನುಪ್ರಾಸಗಳ ಜಂಜಳದಲ್ಲಿ ತೊಳಲಾಡುತ್ತಿದ್ದರೆ, ಹಳೆಯದೆಲ್ಲ ಹಾಳೆನ್ನುವ ಇಂಗ್ಲಿಷ್ ಭಕ್ತರ ಮನಸ್ಸಿಗೆ ತಾವು ಹಳೆಯ ಕಟ್ಟುನಿಟ್ಟುಗಳಿಂದ ಬಿಡುಗಡೆ ಹೊಂದಿದರೂ ಪರದೇಶೀಯ ಸಾಹಿತ್ಯ ಸಂಸ್ಕೃತಿಗಳ ದಾಸಾನುದಾಸರಾಗಿ ಇನ್ನೊಂದು ಬಗೆಯ ಸರ್ವಾಧಿಕಾರವನ್ನು ತಮ್ಮ ಮೇಲೆ ಹೇರಿಕೊಳ್ಳುತ್ತಿದ್ದೇವೆಂಬ ಯೋಚನೆ ಹೊಳೆಯಲಿಲ್ಲ.

ಈ ಕಾಲದಲ್ಲಿ ಬಸಪ್ಪ ಶಾಸ್ತ್ರಿ ಮೊದಲಾದವರು ಕನ್ನಡದಲ್ಲಿ ಹಲವು ಕೃತಿಗಳನ್ನು ಕಟ್ಟಿದರೂ ಕನ್ನಡದ ಸಾಹಿತ್ಯದಲ್ಲಿ ಹೊಸ ಜೀವ ತುಂಬಲಿಲ್ಲ ಕೊನೆಯದಾಗಿ ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಮಾರ್ಗಸಾಹಿತ್ಯವನ್ನು-ರಾಜಸಾಹಿತ್ಯವನ್ನು ಹೇಗಾದರೂ ಉಳಿಸಬೇಕೆಂಬ ಯೋಚನೆಯಿಂದ 'ರಾಮಾಶ್ವಮೇಧ' ರಚಿಸಿ ಮಾರ್ಗಸಾಹಿತ್ಯದ ಅಂತ್ಯವಿಧಿ ನೆರವೇರಿಸಿದಾತ ಮುದ್ದಣ ಕವಿ. ಇಂಗ್ಲಿಷ್ ಭಾಷಾ ಸಾಹಿತ್ಯಗಳ ಭಕ್ತರು ಹತ್ತೊಂಬತ್ತನೆಯ ಶತಮಾನದ ಅಂತ್ಯದ ತನಕವೂ ಸಾಹಿತ್ಯ ರಚನೆಗೆ ವಿಶೇಷವಾಗಿ ಕೈಯಿಕ್ಕಲಿಲ್ಲ. ಬಹುಶಃ ಸರಕಾರದ ಅಧಿಕಾರಿಗಳಾಗಿದ್ದು, ಹೊಟ್ಟೆ ಹೊರೆಯಲು ಅಧಿಕಾರ ನಡೆಸುವುದೇ ಜೀವನದ ಧ್ಯೇಯವಾಗಿದ್ದುದೇ ಇದಕ್ಕೆ ಕಾರಣವಾಗಿರಬಹುದು; ಇಲ್ಲವೆ ಇಂಗ್ಲಿಷ್ ಭಾಷಾ ಸಾಹಿತ್ಯಗಳ ಮಿರುಗಿಗೆ ಮರುಳಾಗಿ ಕನ್ನಡವನ್ನು ಕಡೆಗಣಿಸಿದುದೂ ಕಾರಣವಾಗಿರಬಹುದು. ಈ ತೆರನಾಗಿ ಹತ್ತೊಂಬತ್ತನೆಯ ಶತಮಾನದ ಅಂತ್ಯದ ವರೆಗೂ ನಮ್ಮ ಸಾಹಿತ್ಯ ಹಲವಾರು ಮಾರ್ಪಾಟುಗಳೊಡನೆ ಸಾಗಿ ಬಂದು ಮುಂದೆ ಇನ್ನೊಂದು ತೆರನಾಗಿ ಸಾಗತೊಡಗಿತು. ಮುಂದಿನ ಸಾಗಾಟ ನಮ್ಮ ಹೊಸ ಸಾಹಿತ್ಯದ ಹೊಸ ದಾರಿ ಹಿಡಿಯಿತು.

---

## ೨

# ಹೊಸಗನ್ನಡ ಗದ್ಯಸಾಹಿತ್ಯ

ಹೊಸಗನ್ನಡ ಗದ್ಯಸಾಹಿತ್ಯದ ಆರಂಭಕಾಲ ಸಾಮಾನ್ಯವಾಗಿ ಹದಿನೆಂಟನೆಯ ಶತಮಾನವೆನ್ನಬಹುದು. ಈ ಶತಮಾನದಲ್ಲಿ ಮೈಸೂರೊಡೆಯರ ಆಳಿಕೆಯ ಆಶ್ರಯದಲ್ಲಿ ಹಲವಾರು ಸಂಸ್ಕೃತ ನಾಟಕಗಳೂ ಪುರಾಣ ಗ್ರಂಥಗಳೂ ಕನ್ನಡಕ್ಕಿಳಿದುವು. 'ಚಿಕ್ಕದೇವರಾಜವಂಶಾವಳಿ'ಯಂತಹ ಒಂದೆರಡು ಸ್ವತಂತ್ರಕೃತಿಗಳೂ ಗದ್ಯಕ್ಷೇತ್ರದಲ್ಲಿ ಕಾಣಿಸಿಕೊಂಡುವು. ವಿದೇಶೀ ಮಿಶನರಿಗಳಲ್ಲಿ ಹಲವರು ಆಂಗ್ಲ ಸಾಹಿತ್ಯದ ಒಂದೆರಡು ಕೃತಿಗಳನ್ನೂ, ಕ್ರೈಸ್ತಧರ್ಮಕ್ಕೆ ಸಂಬಂಧಿಸಿದ ಧಾರ್ಮಿಕ ಸಾಹಿತ್ಯದ ಕೆಲವಂಶಗಳನ್ನೂ ಗದ್ಯರೂಪದಲ್ಲಿ ಪರಿವರ್ತಿಸಿದರು. ಈ ರೀತಿಯಾಗಿ ಹದಿನೆಂಟನೆಯ ಶತಮಾನದಲ್ಲಿ ಹೊಸಗನ್ನಡ ಗದ್ಯ ವಿಕಾಸಕ್ಕೆ ತೊಡಗಿತೆನ್ನಬಹುದು. ಆದರೂ ಈ ಶತಮಾನದಲ್ಲಿ ಗದ್ಯಸಾಹಿತ್ಯಕ್ಷೇತ್ರದಲ್ಲಿ ವಿಶೇಷವಾದ ಉನ್ನತಿಯೇನೂ ಆಗಲಿಲ್ಲ. ಹತ್ತೊಂಭತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕೆಂಪುನಾರಾಯಣ ಪಂಡಿತನು 'ಮುದ್ರಾಮಂಜೂಷ'ವನ್ನು ಬರೆದನು. ಮುದ್ರಾಮಂಜೂಷವನ್ನು ಹೊಸಗನ್ನಡದ ಗದ್ಯಕೃತಿಯೆನ್ನಬಹುದಾದರೂ ಹಳೆಗನ್ನಡ ಶೈಲಿಯ ಛಾಯೆ ಅದರ ವಾಕ್ಯವಾಕ್ಯಗಳಲ್ಲಿಯೂ ಹರಿದು ಬಂದಿದೆ. ಭಾಷೆಯೂ ಹಾಗೆಯೆ. ಅತ್ತ ಹಳೆಗನ್ನಡವೂ ಅಲ್ಲ; ಇತ್ತ ಹೊಸ ಗನ್ನಡವೂ ಅಲ್ಲ; ಈ ತೆರನಾಗಿದೆ ಮುದ್ರಾಮಂಜೂಷದ ಭಾಷೆ. ಹತ್ತೊಂಭತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಎಂದರೆ ಸುಮಾರು ೧೮೧೮ನೆಯ ಇಸವಿಯಲ್ಲಿ ರಿವರೆಂಡ್ ರೀವ್ ಇವರ

ಇಂಗ್ಲಿಷ್ ಕನ್ನಡ ನಿಘಂಟು' ಪ್ರಕಟವಾಯಿತು. ೧೮೬೦ರ ಸುಮಾರಿಗೆ ಬೈಬಲ್ ಗ್ರಂಥವು ಸಂಪೂರ್ಣವಾಗಿ ಕನ್ನಡಿಸಲ್ಪಟ್ಟಿತು. ಆದುದರಿಂದ ಹೊಸಗನ್ನಡದ ಗದ್ಯಯುಗವು ಪ್ರಾರಂಭಿಸಿದ ನಿಜವಾದ ಕಾಲ ಹತ್ತೊಂಭತ್ತನೆಯ ಶತಮಾನವೆಂದರೂ ತಪ್ಪಾಗದು. ವಿದೇಶೀ ಮತಪ್ರಚಾರಕರು ಧರ್ಮಪ್ರಚಾರದ ದೃಷ್ಟಿಯಿಂದ ಕನ್ನಡದ ಗದ್ಯ ನಿರ್ಮಾಣದಲ್ಲಿ ಕೈಯಿಕ್ಕಿದರಾದರೂ ನಮ್ಮ ಹೊಸ ಸಾಹಿತ್ಯಕ್ಕೆ ಅದರಿಂದ ತುಂಬಾ ನೆರವು ಸಿಕ್ಕಿತು. ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿ ಎಂದರೆ ಸುಮಾರು ೧೮೪೮ರಲ್ಲಿ ಶುದ್ಧ ಸಾಹಿತ್ಯದೃಷ್ಟಿಯಿಂದ ವಿದೇಶೀ ಮತಪ್ರಚಾರಕರ ಮೂಲಕ ಕನ್ನಡಿಸಲ್ಪಟ್ಟ ಮೊದಲನೆಯ ಆಂಗ್ಲ ಸಾಹಿತ್ಯ ಕೃತಿಯೆಂದರೆ ಜಾನ್‌ಬುನಿಯನ್ನನ 'ಪಿಲ್ಗ್ರಿಮ್ಸ್ ಪ್ರೋಗ್ರೆಸ್' ಎಂಬುದು. 'ಯಾತ್ರಿಕನ ಸಂಚಾರ'ವೆಂಬ ಹೆಸರಿನಿಂದ ಕನ್ನಡ ಗದ್ಯರೂಪಕ್ಕಿಳಿದ ಈ ಕೃತಿಗೆ ಹೊಸಗನ್ನಡ ಗದ್ಯಸಾಹಿತ್ಯದಲ್ಲಿ ಅದೊಂದು ವಿಶಿಷ್ಟವಾದ ಸ್ಥಾನವಿದೆ. ಇದೇ ಕಾಲದಲ್ಲಿ ವಿದೇಶೀ ಧರ್ಮಪ್ರಚಾರಕರು 'ಸಭಾಪತ್ರ', 'ಸತ್ಯದೀಪಿಕೆ'ಗಳೆಂಬೆರಡು ಪತ್ರಿಕೆಗಳನ್ನು ಪ್ರಕಟಿಸಲಾರಂಭಿಸಿದರು. ಕನ್ನಡದಲ್ಲಿ ಪತ್ರಿಕಾವ್ಯವಸಾಯಕ್ಕೂ ಅಸ್ತಿವಾರ ಹಾಕಿದವರು ವಿದೇಶೀ ಮತಪ್ರಚಾರಕರೇ ಆಗಿದ್ದಾರೆ. ಇದೇ ಹೊತ್ತಿಗೆ ಎಂದರೆ ಸುಮಾರು ೧೮೪೯ರಲ್ಲಿ ಬೆಳಗಾಂವಿಯಿಂದ 'ಸುಬುದ್ಧಿಪ್ರಕಾಶ'ವೆಂಬ ಕನ್ನಡ ವಾರಪತ್ರಿಕೆಯೂ ಪ್ರಕಟವಾಗಲಾರಂಭಿಸಿತು. ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ಗದ್ಯಸಾಹಿತ್ಯದ ಬೆಳವಣಿಗೆ ಇನ್ನಷ್ಟು ಮುಂದುವರಿಯಿತು. ಇಂದಿಗೂ ಕನ್ನಡದ ವಿದ್ವಾಂಸರ, ಸಂಶೋಧಕರ ಕೈಗನ್ನಡಿಯಂತಿದ್ದು ಮಹಾಕೋಶವೆನ್ನಿಸಿದ, ರೆವರೆಂಡ್ ಕಿಟ್ಟೆಲ್ ಸಾಹೇಬರ 'ಕನ್ನಡ ಇಂಗ್ಲಿಷ್ ನಿಘಂಟು' ಪ್ರಕಟವಾಯಿತು. ಕನ್ನಡದ ಈ ಮಹಾ ನಿಘಂಟಿನ

ನಿರ್ಮಾಣಕ್ಕಾಗಿ ಇಪ್ಪತ್ತೆಂಟು ವರ್ಷ ಕಾಲ ಎಡೆಬಿಡದೆ ದುಡಿ
ರೆವರೆಂಡ್ ಕಿಟ್ಟೆಲ್ ಸಾಹೇಬರಿಗೆ ಕನ್ನಡಿಗರು ಚಿರಋಣಿಗಳಾ
ದ್ದಾರೆ. ಸುಮಾರು ೧೮೭೦ರಲ್ಲಿ ದಿವಂಗತ ಗಂಗಾಧರ ಮ
ವಾಳೇಶ್ವರ ತುರಮರಿಯವರು ಬಾಣಭಟ್ಟನ ಕಾದಂಬರಿಯನ
ಕನ್ನಡ ಗದ್ಯರೂಪಕ್ಕಿಳಿಸಿದರು. ತುರಮರಿಯವರ ಗದ್ಯಶೈ
ಬಲು ಸೊಗಸಾಗಿದ್ದು ಮಾರ್ಮಿಕವಾಗಿದೆ. ಅದು ಮುಂದಿ
ಗದ್ಯ ಲೇಖಕರಿಗೆ ದಾರಿಹಾಕಿಕೊಟ್ಟಿತೆನ್ನಬಹುದು. ಮತ್ತೆ ತು
ಮರಿಯವರು ಹೊಸಗನ್ನಡ ಗದ್ಯಸಾಹಿತ್ಯದ ಧ್ವಜವನ್ನೆತ್ತಿ ಹಿಡಿದ
ಹಲವಾರು ಸಂಸ್ಕೃತ ನಾಟಕಗಳನ್ನು ಕನ್ನಡಕ್ಕಿಳಿಸಿ ಸುಪ್ರಸಿ
ನಾಟಕಕಾರರೆನ್ನಿಸಿದರು. ಆ ಕಾಲದಲ್ಲಿ ತುರಮರಿಯವರ ಕನ್ನ
ಸೇವೆ ಸಾಹಿತ್ಯಮಂದಿರದ ನಿರ್ಮಾಣದಲ್ಲಿ ತುಂಬಾ ನೆರವುಗೊಟ್ಟಿತು
ಹತ್ತೊಂಭತ್ತನೆಯ ಶತಮಾನದ ಅಂತ್ಯದೊಳಗೆ ನಾಡಿನಲ್ಲಿ ಕನ್ನ
ಶಾಲೆಗಳೂ ಅಚ್ಚುಕೂಟಗಳೂ ಆರಂಭವಾಗಿಹೋದುವು. ಪ
ಪುಸ್ತಕಗಳ ರಚನೆಯೂ ತೊಡಗಿತು. ಇಪ್ಪತ್ತನೆಯ ಶತಮಾನ
ಆರಂಭಕ್ಕೆ ಮಂಗಳೂರಲ್ಲಿ 'ಸುವಾಸಿನಿ' ಪತ್ರಿಕೆ ಜನ್ಮತಾಳಿತು
ಧಾರವಾಡದಲ್ಲಿ 'ವಿದ್ಯಾವರ್ಧಕ ಸಂಘ'ವೂ ಸ್ಥಾಪಿತವಾಯಿತು. ಆ
ಸಂಘದ ಮುಖಪತ್ರಿಕೆಯಾದ 'ವಾಗ್ಭೂಷಣ' ಮಂಗಳೂರ 'ಸುವಾ
ಸಿನಿ' ಉಡುಪಿಯ 'ಕೃಷ್ಣಸೂಕ್ತಿ' ಇವು ಗದ್ಯಸಾಹಿತ್ಯದ ಬೆಳವಣಿ
ಗಾಗಿ ತುಂಬಾ ದುಡಿದುವು. ಹತ್ತೊಂಭತ್ತನೆಯ ಶತಮಾ
ದಲ್ಲಿಯೇ ಕನ್ನಡದ ಗದ್ಯಮಂದಿರದ ಸಂಸ್ಥಾಪಕರೆಂದೆನಿಸಿದ ದಿವಂಗ
ರಾದ ಗಳಗನಾಥರು, ವೆಂಕಟಾಚಾರ್ಯರು, ಕೆರೂರು ವಾಸು
ದೇವಾಚಾರ್ಯರು, ಎಂ. ಎಸ್. ಪುಟ್ಟಣ್ಣನವರು, × ಜೋಳ
ಬಾಬುರಾಯರು, ಗುಲ್ವಾಡಿ ವೆಂಕಟರಾಯರು, ಅಣ್ಣಾಜಿರಾಯರ
ಮುಂತಾದವರು ಮುಂದೆ ಬಂದರು. ೧೯೩೦ರ ಸುಮಾರಿ

× ವಾಗ್ದೇವಿ

ದಿವಂಗತ ಗಳಗನಾಥರ ಮೊದಲಕೃತಿ 'ಪದ್ಮನಯನೆ' ಪ್ರಕಟವಾಯಿತು. ೧೮೯೯ರಲ್ಲಿ ಪ್ರಕಟವಾದ ಗುಲ್ವಾಡಿ ವೆಂಕಟರಾಯರು ಬರೆದ ಇಂದಿರಾದೇವಿ ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿ. ಇದರಲ್ಲಿ ಆ ಕಾಲದ ಕನ್ನಡ ಜಿಲ್ಲೆಯ ಸಾರಸ್ವತ ಸಮಾಜವನ್ನು ಚಿತ್ರಿಸಲಾಗಿದೆ. ನೂತನ ವಿದ್ಯಾಭ್ಯಾಸ, ಪ್ರಾಚೀನ ಅರ್ವಾಚೀನ ಧರ್ಮಗಳ ಸಂಘರ್ಷ, ಸಾಧುಸಂತರ ಕಪಟ, ವಿಧವಾ ವಿವಾಹ, ಸ್ತ್ರೀ ವಿದ್ಯಾಭ್ಯಾಸ ಮೊದಲಾದ ಸುಧಾರಣೆಗಳು ಮೊದಲಾದ ವಿಷಯಗಳ ಸ್ಪಷ್ಟ ಚಿತ್ರಣವಿದೆ ಈ ಕಾದಂಬರಿಯಲ್ಲಿ, ಸಮಾಜವನ್ನು, ಮಠ ದೇವಾಲಯಗಳನ್ನು ಟೀಕಿಸುವಲ್ಲಿ ಕಾದಂಬರೀಕಾರರು ವಹಿಸಿದ ಧೈರ್ಯ ಮುಂದಿನ ಕಾದಂಬರೀಕಾರರರಿಗೆ ಕೈಕಂಬವಾಗಿದೆ. ಈ ಕಾದಂಬರಿಯ ಭಾಷಾಶೈಲಿಗಳೂ ಪರಿಮಾರ್ಜಿತವಾಗಿವೆ. ಮುಂದೆ ೧೯೦೫ರಲ್ಲಿ ಬೋಳಾರ ಬಾಬುರಾಯರ ವಾಗ್ದೇವಿ ಪ್ರಕಟವಾಯಿತು. ಇದು ಮಠಗಳ ಸನ್ಯಾಸಿಗಳ ದುರ್ನಡತೆಯನ್ನು ಕಾಮುಜೀವನವನ್ನು ಬಯಲಿಗೆಳೆಯುವ ಸ್ವತಂತ್ರ ಸಾಮಾಜಿಕ ಕಾದಂಬರಿ. ಹಾಗೆಯೇ ಗುಲ್ವಾಡಿ ಅಣ್ಣಾಜಿರಾಯರ ೧೯೦೬ರಲ್ಲಿ ಪ್ರಕಟವಾದ ರೋಹಿಣೀ ಕಾದಂಬರಿಯೂ ಸ್ವತಂತ್ರ ಸಾಮಾಜಿಕ ಕಾದಂಬರಿಯಾಗಿದೆ. ಕನ್ನಡ ಕಾದಂಬರಿ ಸಾಹಿತ್ಯದ ಇತಿಹಾಸದಲ್ಲಿ ಮೊತ್ತಮೊದಲ ಈ ಮೂರು ಕಾದಂಬರಿಗಳಿಗೆ ಮೊದಲಮಣೆ ಸಲ್ಲಲೇ ಬೇಕು.

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಕನ್ನಡದ ಸಣ್ಣ ಕತೆಗಳ ಜನಕರಾದ ದಿವಂಗತ ಪಂಜೆ ಮಂಗೇಶರಾಯರು 'ನನ್ನ ಚಿಕ್ಕಪ್ಪ' 'ನನ್ನ ಚಿಕ್ಕ ತಾಯಿ' ಮೊದಲಾದ ಹಲವು ಸಣ್ಣ ಕತೆಗಳನ್ನು ಕಟ್ಟಿ ಸುವಾಸಿನಿಯಲ್ಲಿ ಪ್ರಕಟಿಸಿದರು. ಈ ಕಾಲಕ್ಕೆ ಕನ್ನಡದ ಗದ್ಯಸಾಹಿತ್ಯ, ಪತ್ರಿಕಾವ್ಯವಸಾಯ, ಕಾದಂಬರಿಗಳು,

ಸಣ್ಣ ಕತೆಗಳು, ಪ್ರಬಂಧಗಳು ಮೊದಲಾದ ವಿವಿಧ ರೂಪ
ಗಳಿಂದ ವಿಕಾಸಹೊಂದಿ ಮುಂದುವರಿಯತೊಡಗಿತು. ಹತ್ತೊಂಬ
ತ್ತನೆಯ ಶತಮಾನದ ಅಂತ್ಯದಲ್ಲಿಯೇ ತೊಡಗಿದ ದಿವಂಗತ
ವೆಂಕಟಾಚಾರ್ಯರ ಬಂಗಾಳಿ ಕಾದಂಬರಿಗಳ ಅನುವಾದಗಳೂ,
ಗಳಗನಾಥರ ಮರಾಠೀ ಪರಿವರ್ತನೆಗಳೂ ವಿಪುಲವಾಗಿ ಬರ
ತೊಡಗಿ ಕನ್ನಡದ ಓದನ್ನೇ ಮರೆತುಬಿಟ್ಟಿದ್ದ ಕನ್ನಡಿಗರನ್ನು
ಓದಲಿಕ್ಕೆ ಹಚ್ಚಿದವು. ಆಗಲೇ ದಿವಂಗತ ಎಂ. ಎಸ್. ಪುಟ್ಟಣ್ಣ
ನವರು ಹೊಸಗನ್ನಡದ ಉತ್ತಮ ಗದ್ಯಕೃತಿಗಳೆನ್ನಬಹುದಾದ
ಹಲವು ಗ್ರಂಥಗಳನ್ನು ರಚಿಸಿದರು. ಹೊಸಗನ್ನಡ ಗದ್ಯಯುಗದ
ಈ ಆರಂಭಿಕ ಅವಸ್ಥೆಯಲ್ಲಿಯೇ ಮುದ್ದಣ್ಣನ 'ಅದ್ಭುತ ರಾಮಾ
ಯಣ', 'ರಾಮಾಶ್ವಮೇಧ'ಗಳು ಹಳೆಗನ್ನಡದ ಭಾಷೆಯ ಹೊಸ
ಶೈಲಿಯಲ್ಲಿ ರಚಿತವಾಗಿ ಕತೆಗಾರಿಕೆಯ ಚಮತ್ಕಾರ, ಬಣ್ಣನೆಯ
ಬೆಡಗುಗಳು ಕನ್ನಡಿಗರ ಮನಮೆಚ್ಚಿಸಿದುವು. ಮುದ್ದಣ್ಣನ ಭಾಷೆ
ಹಳೆಯದು; ಶೈಲಿ ಹೊಸತು. ಕತೆಗಾರಿಕೆಯ ಚಮತ್ಕಾರ
ಬಣ್ಣನೆಯ ಬೆಡಗುಗಳಂತೂ ಅಪೂರ್ವ. ಹತ್ತೊಂಭತ್ತನೆಯ
ಶತಮಾನದಲ್ಲಿಯೂ, ಇಪ್ಪತ್ತನೆಯ ಶತಮಾನದ ಆದಿಯಲ್ಲಿಯೂ
ವಿಚಾರಕ್ರಾಂತಿಯು ನವೀನ ಭಾವನೆಗಳ ಕುರುಹು ಮಾತ್ರ ಕಂಡು
ಬರುವುದಿಲ್ಲ. ಈ ಕಾಲದಲ್ಲಿ ಪ್ರಕಟವಾದ ಎಲ್ಲಾ ಕೃತಿಗಳೂ
ಒಂದಲ್ಲ ಒಂದು ತೆರದಿಂದ ಹೆರವರಿಂದ ಎರವು ಪಡೆದು ಕನ್ನಡದ
ಒಪ್ಪವಿತ್ತ ಕೃತಿಗಳೇ ಆಗಿವೆ. ಆದರೆ ದಿವಂಗತರಾದ ಕೆರೂರ
ವಾಸುದೇವಾಚಾರ್ಯರು, ಎಂ. ಎಸ್. ಪುಟ್ಟಣ್ಣನವರು, ಪಂಜೆ
ಮಂಗೇಶರಾಯರು ಮುಂತಾದ ಕೆಲವಂದಿ ಲೇಖಕರು ಸ್ವತಂತ್ರ
ವಾದ ಕತೆಕಾದಂಬರಿಗಳನ್ನು ರಚಿಸಿ ಮುಂದಿನವರು ಸ್ವತಂತ್ರವಾಗಿ
ಮುಂದುವರಿಯಲು ದಾರಿತೋರಿಸಿದ್ದಾರೆ. ಹತ್ತೊಂಭತ್ತನೆಯ

ಶತಮಾನ ಮತ್ತು ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಶೈಲಿಯಲ್ಲಾಗಲೀ ವಿಚಾರದಲ್ಲಾಗಲೀ ಸ್ವತಂತ್ರ ಮಾರ್ಗ ವಿಶೇಷವಾಗಿ ಕಾಣಬಾರದಂತೆ ಭಾಷೆಯೂ ಪರಿಮಾರ್ಜಿತವಾಗಲಿಲ್ಲ.

ಇಪ್ಪತ್ತನೆಯ ಶತಮಾನದಲ್ಲಿ ಹತ್ತು ಹದಿನೈದು ವರ್ಷ ಸಂದಾಗ ಹೊಸಗನ್ನಡ ಗದ್ಯ ವೃಕ್ಷ ನಾನಾ ಶಾಖೆಗಳಾಗಿ ಪಸರಿಸಿ ಬೆಳೆಯತೊಡಗಿತು. ಕರ್ಣಾಟಕ ಏಕೀಕರಣದ 'ಪೈಗಂಬರ'ರಾದ ಕರ್ಣಾಟಕದ ಕುಲಪುರೋಹಿತ ಆಲೂರ ವೆಂಕಟರಾಯರು ಕನ್ನಡ ಗ್ರಂಥಕರ್ತರ ಸಮ್ಮೇಳನ ಜರಗಿಸಿದರು. 'ಕರ್ಣಾಕ ಗತವೈಭವ'ವನ್ನು ಕನ್ನಡಿಗರ ಮುಂದಿರಿಸಿ ಕಣ್ಣು ತೆರೆಯಿಸಿದರು. ಆಲೂರರ ಹುರುಪಿನ ಗಂಭೀರ ಶೈಲಿಯ ಗದ್ಯ ಅರೆ ನಿದ್ದೆಯಲ್ಲಿ ತೂಕಡಿಸುತ್ತಿದ್ದ, ಪರಭಾಷೆಯ ಬಣ್ಣ ಬೆಡಗುಗಳಿಗೆ ಮನಸೋತು ಮಂಕಾಗಿದ್ದ ಕನ್ನಡಿಗರನ್ನೆಚ್ಚರಿಸಿ ಅವರಲ್ಲಿ ಕನ್ನಡತ್ವದ ಉಜ್ವಲ ಅಭಿಮಾನವನ್ನು ಕೈಸಿತು. ಸ್ವತಂತ್ರ ವಿಚಾರ ಶೈಲಿಯಲ್ಲಿಯೂ ಕನ್ನಡತ್ವದ ಅಭಿಮಾನ ಗೌರವವನ್ನುಂಟುಮಾಡುವ ಕ್ರಿಯಾ ಶಕ್ತಿಯಲ್ಲಿಯೂ "ಕರ್ಣಾಟಕ ಗತವೈಭವ" ನಮ್ಮ ಗದ್ಯ ಸಾಹಿತ್ಯದಲ್ಲಿಯೇ ಆದಿಗ್ರಂಥವಾಗಿ ಪರಿಣಮಿಸಿತು. ಕರ್ಣಾಟಕ ಏಕೀರಣವೇ ಆದಿಯಾದ ಕನ್ನಡ ನಾಡುನುಡಿಗಳ ಸರ್ವತೋಮುಖವಾದ ಉನ್ನತಿಗೆ 'ಗತವೈಭವ'ವೇ ದಾರಿತೋರಿತು. ಇಂದಿನ ತನಕವೂ ಕನ್ನಡದ ಏಳಿಗೆಯ ಕಾರ್ಯದಲ್ಲಿ ಈ ಕೃತಿರತ್ನದಷ್ಟು ಫಲಕಾರಿಯಾದ ಇನ್ನೊಂದು ಗದ್ಯಗ್ರಂಥ ಹುಟ್ಟಿಲ್ಲವೆಂದರೂ ಹೆಚ್ಚಾಗದು. ಹಿಂದಿನ ಗದ್ಯಲೇಖಕರೊಡನೆ ಹೊಸಕೆರೆ ಚಿದಂಬರಯ್ಯ, ನಾರಾಯಣ ವೆಂಕಟೇಶ ಕುರಡಿ, ನಂಜನಗೂಡು ತಿರುಮಲಮ್ಮ, ಮಂಜೇಶ್ವರ ಗೋವಿಂದ ಪೈ, ಎಂ. ಎನ್. ಕಾಮತ್ ಮೊದಲಾದವರು ಗದ್ಯ ಮಂದಿರದ ನಿರ್ಮಾಣ ಕಾರ್ಯದಲ್ಲಿ ಕೈಯಿಕ್ಕಿ ಸತತವಾಗಿ ದುಡಿಯು

ತೊಡಗಿದರು. ಗದ್ಯ ನಿರ್ಮಾಣ ಕಾರ್ಯದಲ್ಲಿ ಮೊತ್ತಮೊದಲು ಕೈಹಾಕಿದ ಸ್ತ್ರೀ ಲೇಖಿಕೆಯೆಂದರೆ ನಂಜನಗೂಡು ತಿರುಮಲಮ್ಮನವರು. ಇವರು 'ಸತೀ ಹಿತೈಷಿಣಿ' ಗ್ರಂಥಮಾಲೆಯಲ್ಲಿ 'ಸುಶೀಲೆ', 'ಸತೀತ್ವರಕ್ಷಿಣಿ', 'ವಿದ್ಯುಲ್ಲತಾ', 'ವಿರಾಗಿಣಿ', 'ದಕ್ಷಕನ್ಯಾ' 'ಕರ್ನಾಟಕ ಮಾತೃನಂದಿನಿ' ಮೊದಲಾದ ಇನ್ನೂ ಹಲವಾರು ಗದ್ಯಕೃತಿಗಳನ್ನು ನಿರ್ಮಾಣ ಮಾಡಿ ಕನ್ನಡದ ಬರೆಹಗಾರ್ತಿಯರಿಗೆ ಮೇಲ್ಪಂಕ್ತಿಯಾದರು. ಶ್ರೀಮತಿ ತಿರುಮಲಮ್ಮನವರ ಕಾದಂಬರಿಗಳೆಲ್ಲಾ ಹೆಚ್ಚಾಗಿ ಸ್ವತಂತ್ರ ಕೃತಿಗಳಾಗಿದ್ದು ಸ್ತ್ರೀ ವಿದ್ಯಾಭ್ಯಾಸದ ಆವಶ್ಯಕತೆ ಆದರ್ಶವಾದಗಳನ್ನು ಸಾರುತ್ತವೆ. ಮತ್ತೆ ಇಪ್ಪತ್ತನೆಯ ಶತಮಾನದ ಆರಂಭ ಕಾಲದಲ್ಲಿ ಶ್ರೀಗಳಾದ ಮುದವೀಡು ಕೃಷ್ಣರಾಯರ ವೀರಗರ್ಜನೆ, ಶಾಂತ ಕವಿಗಳ ವಿನೀತ ಪ್ರಾರ್ಥನೆ ಇವೆಲ್ಲ ಗದ್ಯಮಂದಿರದ ನಿರ್ಮಾಣ ಕಾರ್ಯದಲ್ಲಿ ತುಂಬಾ ನೆರವಾದುವು. ೧೯೧೫ನೆಯ ಇಸವಿಯಲ್ಲಿ ಮೈಸೂರರಸರ ಕೃಪಾಛತ್ರದಡಿಯಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾಯಿತು. ದಿವಂಗತ ಬಿ. ಎಂ. ಶ್ರೀಕಂಠಯ್ಯನವರು, ಶ್ರೀ ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರು ಕನ್ನಡ ನುಡಿಯ ವೀರ ಬಂಟರಾಗಿ ಮುಂದೆ ಬಂದರು. ೧೯೨೦ನೆಯ ಇಸವಿಯ ತನಕವೂ ಅನೇಕಂದು ತೆರನಾಗಿ ಹರಿದು ಬಂದ ಹೊಸಗನ್ನಡ ಗದ್ಯಸಾಹಿತ್ಯ ಮುಂದೆ ನಾನಾಮುಖವಾಗಿ ಎಂದರೆ ಸಣ್ಣಕತೆ, ಕಾದಂಬರಿ, ಏಕಾಂಕ ನಾಟಕ, ವಿಡಂಬನೆ, ವಿಮರ್ಶೆ, ಶಾಸ್ತ್ರೀಯ ಗ್ರಂಥಗಳು, ಸಂಶೋಧನಾತ್ಮಕ ಪ್ರಬಂಧಗಳು, ಉಪನ್ಯಾಸಗಳು ಎಂದು ಮುಂತಾದ ಪಾಶ್ಚಿಮಾತ್ಯ ಸಾಹಿತ್ಯ ಪ್ರಕಾರಗಳ ಮೇಲ್ಪಂಕ್ತಿಯನ್ನು ಮುಂದಿಟ್ಟು ಬೆಳೆಯ ತೊಡಗಿತು. ನಮ್ಮ ಗದ್ಯ ಸಾಹಿತ್ಯದಲ್ಲಿ ಈ ಎಲ್ಲಾ ಪ್ರಕಾರಗಳೂ ಒಮ್ಮೆಯೇ ಬಳಕೆಗೆ ಬರಲಿಲ್ಲ. ಕಾಲ ಕಳೆಯುತ್ತಾ ಹೋದಂತೆ

ಒಂದೊಂದೇ ಪ್ರಕಾರಗಳು ಗದ್ಯ ಕ್ಷೇತ್ರದಲ್ಲಿ ಅಡಿ ಇಟ್ಟವು; ಭಾಷಾ ಶೈಲಿಗಳೂ ಪರಿಮಾರ್ಜಿತವಾಗಿ ಬರತೊಡಗಿದವು. ಈ ಕಾಲದಲ್ಲಿ ಗದ್ಯ ನಿರ್ಮಾಣ ಕಾರ್ಯದಲ್ಲಿ ಹಲವಾರುಮಂದಿ ನುಡಿಯ ಭಕ್ತರು ಮುಂದೆ ಬಂದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟಕ ಸಂಘ ಸಂಘಟಿತವಾಯಿತು. ಹೊಸಗನ್ನಡ ಅಶ್ವಿನೀ ದೇವತೆಗಳೆನ್ನಿಸಿಕೊಂಡ ದಿವಂಗತ ಟಿ. ಎಸ್. ವೆಂಕಣ್ಣಯ್ಯನವರೂ ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳೂ ಗದ್ಯಸಾಹಿತ್ಯದ ವಿಕಾಸಕ್ಕಾಗಿ ಸೊಂಟಕಟ್ಟಿ ದುಡಿಯಲಾರಂಭಿಸಿದರು. ಶ್ರೀ. ಡಿ. ವಿ. ಗುಂಡಪ್ಪ ನವರ ಸ್ವತಂತ್ರ ಗಂಭೀರ ಶೈಲಿ ನಮ್ಮ ಸಾಹಿತ್ಯದಲ್ಲಿ ಹಿರಿದೆನಿಸಿತು. ಶ್ರೀಯುತರನ್ನು ಹೊಸಗನ್ನಡದ ಗದ್ಯಾಶ್ರಮ ಗುರುಗಳೆಂದರೂ ಸರಿಯೇ. ಇದೇ ಸಮಯಕ್ಕೆ ಧಾರವಾಡದಲ್ಲಿ ಕನ್ನಡದ ಆಧ್ಯಾತ್ಮಿಕ ದಿವಾಕರನ ಉದಯವಾಯಿತು. ಕರ್ಣಾಟಕ ಶಿಕ್ಷಣ ಸಮಿತಿಯು ಸ್ಥಾಪಿತವಾಯಿತು. ಕನ್ನಡ ಆಧುನಿಕ ಗದ್ಯ ನಿರ್ಮಾಣದಲ್ಲಿ ಕರ್ಣಾಟಕ ವಿದ್ಯಾವರ್ಧಕ ಸಂಘ, ಶಿಕ್ಷಣ ಸಮಿತಿ, ಬೆಂಗಳೂರಿನ ಕರ್ಣಾಟಕ ಸಂಘ ಈ ಮೂರು ಸಂಸ್ಥೆಗಳು ಮಾಡಿದ ಕಾರ್ಯ ವಿಶೇಷ ಮಹತ್ವದ್ದಾಗಿದೆ. ಶ್ರೀ। ರಂಗನಾಥ ದಿವಾಕರರ ಆಧ್ಯಾತ್ಮಿಕ ಗದ್ಯ ಕನ್ನಡ ಸಾಹಿತ್ಯಕ್ಕೆ ತುಂಬಾ ಕಳೆಗೂಡಿಸಿತು. ನಮ್ಮ ಸಾಹಿತ್ಯದ ವಿವಿಧ ಪ್ರಕಾರಗಳ ಇತಿಹಾಸದಲ್ಲಿ ಗದ್ಯ ಸಾಹಿತ್ಯದ ಇತಿಹಾಸವೂ ಒಂದು. ಶ್ರೀ। ದಿವಾಕರರಿಗೆ ಅದರಲ್ಲೊಂದು ವಿಶಿಷ್ಟ ಸ್ಥಾನವಿದೆ. ಇನ್ನು ಆ ಕಾಲದಲ್ಲಿ ವಿಚಾರಪ್ರಚೋಧಕ ಕ್ರಾಂತಿ ಕಾರಕ ಗದ್ಯವೆಂದರೆ ದಿವಂಗತ ಪಂಡಿತ ತಾರಾನಾಥರದು. ಅವರ 'ಧರ್ಮಸಂಭವ' ಕನ್ನಡ ಗದ್ಯ ಕ್ಷೇತ್ರದಲ್ಲಿ ಸೃಷ್ಟಿಯಾದ ಮೊದಲ ನೆಯ ಕ್ರಾಂತಿಕಾರಕ ವಿಚಾರಪೂರಿತ ಗ್ರಂಥ. ತಾರಾನಾಥರ ಧರ್ಮಸಂಭವದಲ್ಲಿಯೂ ಸಣ್ಣಕತೆಗಳಲ್ಲಿಯೂ ಕ್ರಾಂತಿಕಾರಕ

ವಾದ ಮನೋವೃತ್ತಿ ಮಾತುಮಾತಿನಲ್ಲಿಯೂ ವ್ಯಕ್ತವಾಗುತ್ತದೆ. 'ಧರ್ಮಸಂಭವ'ದ ಸಾಲಿಗೆ ಸೇರುವ ವಿಚಾರ ಕ್ರಾಂತಿಯ ಸ್ವತಂತ್ರ ಮಾರ್ಗದ ಇನ್ನೊಂದು ಗದ್ಯಕೃತಿಯೆಂದರೆ ಇತ್ತೀಚೆಗೆ ಪ್ರಕಟವಾದ ಶ್ರೀ। ಶಿವರಾಮ ಕಾರಂತರ 'ಬಾಳ್ವೆಯೇ ಬೆಳಕು'. 'ಧರ್ಮಸಂಭವ' ಇವೆರಡು ಕೃತಿಗಳು ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟತೆ ಪಡೆದಿದ್ದು ಕನ್ನಡ ತರುಣರ ಕೈಪಿಡಿಗಳಂತಿವೆ. ನಮ್ಮ ತರುಣರು ಬಾಳ್ವೆಯಲ್ಲಿ ಬೆಳಕು ಕಂಡು ಜನಾಂಗನಿರ್ಮಾಣದ ಕಾರ್ಯದಲ್ಲಿ ಸಫಲವಾಗುವಂತೆ ಈ ಎರಡು ಕೃತಿಗಳು ದಾರಿ ತೋರಿಸಬಹುದು.

೧೯೩೫ನೆಯ ಇಸವಿಯಿಂದ ಮೊದಲ್ಗೊಂಡು ಬಹುಮುಖವಾಗಿ ಬೆಳೆದ ಕನ್ನಡ ಗದ್ಯ ಸಾಹಿತ್ಯದಲ್ಲಿ ಕಥಾಸಾಹಿತ್ಯ ಮಾಸ್ತಿ ವೆಂಕಟೇಶ ಐಯ್ಯಂಗಾರರು, ಬೆಟಗೇರಿ ಕೃಷ್ಣ ಶರ್ಮರು ಮೊದಲಾದವರಿಂದ ಬೆಳೆದರೆ, ಕಾದಂಬರೀ ಸಾಹಿತ್ಯ ಶಿವರಾಮ ಕಾರಂತರು, ಅ. ನ. ಕೃಷ್ಣರಾಯರು, ಕೆ. ವಿ. ಪುಟ್ಟಪ್ಪನವರು, ರಂ. ಶ್ರೀ. ಮುಗುಳಿಯವರು, ಕಡೆಂಗೋಡ್ಲು ಶಂಕರ ಭಟ್ಟರು ಮೊದಲಾದವರಿಂದ ಉನ್ನತಿಯ ದಾರಿ ಹಿಡಿಯಿತು. ನಾಟಕ ಪಿತಾಮಹನೆನಿಸಿದ ದಿವಂಗತ ಟಿ. ಪಿ. ಕೈಲಾಸಂ ಅವರಿಂದ ಆರಂಭವಾದ ಏಕಾಂಕ ನಾಟಕ ಸಾಹಿತ್ಯ ಶ್ರೀರಂಗ, ಕಾರಂತರಿಂದಲೂ, ನಾಟಕ ಸಾಹಿತ್ಯ ಶ್ರೀ। ಸಿ. ಕೆ. ವೆಂಕಟರಾಮಯ್ಯನವರಿಂದಲೂ ಪ್ರಗತಿಗೊಂಡಿತು. ವಿಡಂಬನಾತ್ಮಕ ಸಾಹಿತ್ಯದಲ್ಲಿ ಶ್ರೀ। ಜಿ. ಪಿ. ರಾಜರತ್ನಂ ಅವರು ಹೊಸದಾರಿ ಹಾಕಿದರು. ಶ್ರೀ। ನಾ. ಕಸ್ತೂರಿಯವರ ಸರಳ ಹಾಸ್ಯ ತನ್ನದೇ ಆದ ದಾರಿಯಲ್ಲಿ ಮುಂದುವರಿಯುತ್ತಿದೆ. ವ್ಯಕ್ತಿ ಪರಿಚಯ, ಗಾಂಧೀ ಸಾಹಿತ್ಯಗಳನ್ನು ನಿರ್ಮಾಣ ಮಾಡುತ್ತ ಶ್ರೀ। ಸಿದ್ಧವನಹಳ್ಳಿ ಕೃಷ್ಣ ಶರ್ಮರು ಗದ್ಯಕ್ಕೆ ಕಳೆಗೂಡಿಸಿದರು.

ವಿಮರ್ಶನಾತ್ಮಕ ಗದ್ಯ ನಮ್ಮ ಸಾಹಿತ್ಯದಲ್ಲಿ ಇನ್ನೂ ಸಾಕಷ್ಟು ಬೆಳೆದಿಲ್ಲವೆನ್ನಬಹುದು. ಶ್ರೀಗಳಾದ ಮಾಸ್ತಿ ವೆಂಕಟೇಶ ಐಯ್ಯಂಗಾರರು, ಎಸ್. ಎಸ್. ಮಾಳವಾಡರು, ಸಿ. ಕೆ. ವೆಂಕಟರಾಮಯ್ಯನವರು, ಎ. ಆರ್. ಕೃಷ್ಣಶಾಸ್ತ್ರಿಗಳು, ದತ್ತಾತ್ರೇಯ ಬೇಂದ್ರೆಯವರು, ಮುಳಿಯ ತಿಮ್ಮಪ್ಪಯ್ಯನವರು, ವಿ. ಕೃ. ಗೋಕಾಕರು ಮುಂತಾದವರು ವಿಮರ್ಶಾತ್ಮಕ ಸಾಹಿತ್ಯದ ಉನ್ನತಿಗಾಗಿ ದುಡಿಯುತ್ತಲೇ ಇದ್ದಾರೆ. ನಮ್ಮ ಸಾಹಿತ್ಯದ ಇತಿಹಾಸದಲ್ಲಿ ಸ್ವತಂತ್ರ ಕಾದಂಬರೀ ಸಾಹಿತ್ಯಕ್ಕೆ ಅಡಿಗಲ್ಲು ಹಾಕಿದವರೆಂದು ಹೇಳಲು ಯೋಗ್ಯರಾದವರು ಶ್ರೀಗಳಾದ ಅ. ನ. ಕೃಷ್ಣರಾಯರು, ಶಿವರಾಮ ಕಾರಂತರು, ಕೆ. ವಿ. ಪುಟ್ಟಪ್ಪನವರು—ಈ ಮೂವರೇ ಎನ್ನಬಹುದು. ಅ. ನ. ಕೃಷ್ಣರಾಯರ ಮತ್ತು ಶಿವರಾಮ ಕಾರಂತರ ಗದ್ಯಗಳು ಸುಲಲಿತ ಮನೋಹರವಾಗಿದ್ದು ಜನತೆಯಿಂದ ಸಾಕಷ್ಟು ಮನ್ನಣೆ ಪಡೆದಿವೆ. ಈ ಇಬ್ಬರೂ ತಮ್ಮದೇ ಆದ ಸ್ವತಂತ್ರ ಭಾಷೆಗಳನ್ನಿಟ್ಟುಕೊಂಡಿದ್ದಾರೆ. ಅ. ನ. ಕೃಷ್ಣರಾಯರ ಕಾದಂಬರಿಗಳಲ್ಲಿ ಅದೊಂದು ಬಗೆಯ ಆದರ್ಶವಾದ ಹರಿಯುತ್ತಿದ್ದರೆ, ಕಾರಂತರ ಕಾದಂಬರಿಗಳಲ್ಲಿ ಪಾತ್ರ ಸೃಷ್ಟಿಯ ನೈಪುಣ್ಯ, ಸ್ವಾಭಾವಿಕತೆ, ಸ್ವಭಾವ ಚಿತ್ರಗಳ ಪರಿಪೂರ್ಣತೆ ಮೊದಲಾದ ಗುಣಗಳು ಕಂಡುಬರುತ್ತವೆ. ಕೆ. ವಿ. ಪುಟ್ಟಪ್ಪನವರ ಗದ್ಯದ ಭಾಷೆ ಶೈಲಿಗಳು ಭಾವನಾಪ್ರಧಾನವೂ ಕವಿತಾಪೂರ್ಣವೂ ಆಗಿದ್ದು, ಜನಸಾಮಾನ್ಯರ ಎದೆ ಮುಟ್ಟುವುದು ತುಸು ಕಷ್ಟಸಾಧ್ಯವಾದರೂ ಜನಜೀವನದ ಸ್ಪಷ್ಟ ಚಿತ್ರಣವನ್ನು ಓದುಗರ ಕಣ್ಣು ಮುಂದಿರಿಸುತ್ತಿದೆ. ಮಾನವ ಜೀವನದ ವಿರಿಳಿತಗಳ ನೈಜ ಚಿತ್ರಗಳನ್ನು ಇವರ ಕೃತಿಗಳಲ್ಲಿ ಕಾಣಬಹುದು. ಸಣ್ಣ ಕತೆಗಳ ರೂಪದಲ್ಲಿರುವ ಗದ್ಯ ಸಾಹಿತ್ಯದ ಪ್ರಕಾರ ಪ್ರಾರಂಭದಂತೆ ಪ್ರಗತಿಪರವಾಗಿ ಹರಿಯುತ್ತಿರುವುದು ಕಾಣಬರುವುದಿಲ್ಲ.

ಕತೆಗಳೇನೋ ಲೆಕ್ಕವಿಲ್ಲದಷ್ಟು ಸೃಷ್ಟಿಯಾಗುತ್ತಿದ್ದರೂ ಪ್ರಗತಿ ಭಾವನೆ, ವಿಚಾರಕ್ರಾಂತಿ, ಸ್ವತಂತ್ರಶೈಲಿ, ಭಾಷಾಶುದ್ಧತೆ ಮುಂತಾದುವುಗಳು ಕುಂಠಿತವಾಗುತ್ತ ಬರುವುದನ್ನು ನಾವು ಕಾಣುತ್ತೇವೆ. ಹೆಚ್ಚಿನ ಕತೆಗಾರರಲ್ಲಿ ಕತೆಗಾರಿಕೆಯ ಅಭಾವವೇ ಎದ್ದು ಕಾಣುತ್ತದೆ. ಇನ್ನು ಏಕಾಂಕ ನಾಟಕಗಳ ಗದ್ಯದಲ್ಲಿ ಭಾಷೆಯ ವಿಪರೀತ ಪ್ರಾಂತಭೇದ ಓದುಗರಿಗೆ ತುಂಬಾ ತೊಡಕನ್ನುಂಟು ಮಾಡಿದೆ. ಕೈಲಾಸಂ, ಶ್ರೀರಂಗರ ಏಕಾಂಕ ಕೃತಿಗಳು ಸ್ವಾಭಾವಿಕತೆಯ ದೃಷ್ಟಿಯಿಂದ ಇಲ್ಲವೇ ಪಾತ್ರ ರಚನೆಯ ದೃಷ್ಟಿಯಿಂದ ಎಷ್ಟೇ ಉತ್ತಮವಾಗಿದ್ದರೂ ಓದುಗರಲ್ಲಿ ಅಧಿಕಾಂಶ ಜನಕ್ಕೆ ಉಕ್ಕಿನ ಕಡಲೆಗಳೇ ಆಗಿ ಪರಿಣಮಿಸಿವೆ ಎಂದರೂ ಹೆಚ್ಚಾಗದು. ವಿಚಾರ ಕ್ರಾಂತಿ, ಸಾಮಾಜಿಕ ಅಂಧವಿಶ್ವಾಸಗಳ ನಿರ್ದಾಕ್ಷಿಣ್ಯ ಟೀಕೆ, ಪಾತ್ರ ಸೃಷ್ಟಿಯ ನೈಪುಣ್ಯ ಮುಂತಾದ ವಿಷಯಗಳಲ್ಲಿ ಏಕಾಂಕ ನಾಟಕಗಳ ರಚನೆಯಲ್ಲಿ ಕಾರಂತರೂ ಶ್ರೀರಂಗರೂ ಸಾಮಾನ್ಯ ಒಂದೇ ಮಟ್ಟದಲ್ಲಿ ನಿಲ್ಲುತ್ತಾರೆ. ಪತ್ರಿಕಾ ವ್ಯವಸಾಯ—ಅಗ್ರಲೇಖನ ಕಲೆ—ಇದೂ ಗದ್ಯ ಸಾಹಿತ್ಯದಲ್ಲಿ ಒಂದು ಪ್ರಕಾರವಾಗಿದೆ. ೧೯೩೫ರಿಂದ ಇಂದಿನ ತನಕ ನಮ್ಮ ಗದ್ಯ ಸಾಹಿತ್ಯ ಈ ವಿಭಾಗದಲ್ಲಿ ಸಾಕಷ್ಟು ಬೆಳೆದಿಲ್ಲವೆಂದು ಹೇಳಬಹುದು. ಪರಿಣಾಮಕಾರಕವಾದ ಅಗ್ರಲೇಖನ ಕಲೆಯಲ್ಲಿ ಸಫಲತೆ ಪಡೆದವರೆಂದು ಹೇಳಬಹುದಾದರೆ ನಾಲ್ವರನ್ನು ಮಾತ್ರ. ಕರ್ಮವೀರದ ದಿವಾಕರರು, ಕರ್ನಾಟಕ ಧುರೀಣದ ರಾಮಯೋಜಿಗಳು, ವಿಶ್ವಕರ್ನಾಟಕದ ತಾತಾಚಾರ್ಯ ಶರ್ಮರು, ರಾಷ್ಟ್ರಬಂಧುವಿನ ಶಂಕರ ಭಟ್ಟರು ಈ ನಾಲ್ವರ ಅಗ್ರಲೇಖನದ ಗದ್ಯ ಉತ್ತಮ ತರಗತಿಯದೆನ್ನಬಹುದು.

ಇನ್ನು ಅನುವಾದ ಗದ್ಯಗಳ ವಿಚಾರ. ಅನುವಾದದ ವಿಭಾಗದಲ್ಲಿ ನಮ್ಮ ಗದ್ಯ ಸಾಹಿತ್ಯ ಏನೇನೂ ಮುಂದುವರಿದುದು ಸಾಲದು.

ಇಂದಿನ ತನಕದ ಕನ್ನಡ ಸಾಹಿತ್ಯ ಅರ್ಧಕ್ಕರ್ಧ ಅನುವಾದ ಗಳಿಂದಲೇ ತುಂಬಿಹೋಗಿದ್ದರೂ, ಸುಯೋಗ್ಯವೂ ಸಫಲತಾಪೂರ್ವ ಕವೂ ಆದ ಅನುವಾದಗಳು ತುಂಬಾ ವಿರಳವಾಗಿವೆ. ಕನ್ನಡ ಗದ್ಯ ಸಾಹಿತ್ಯದ ಈ ವಿಭಾಗದಲ್ಲಿ ಸಫಲತಾಪೂರ್ವಕ ಕಾರ್ಯ ವೆಸಗಿದವರಲ್ಲಿ ಶ್ರೀ। ಜಿ. ಪಿ. ರಾಜರತ್ನಂ ಮೊದಲನೆಯವರು. ಶ್ರೀಯುತರು ಪಾಲೀಸಾಹಿತ್ಯವನ್ನು ಕನ್ನಡಕ್ಕಿಳಿಸಿ ಹೊಸಗನ್ನಡ ಗದ್ಯದ ಬೆಳವಣಿಗೆಗೆ ತುಂಬಾ ನೆರವಾದರು. ರಾಜರತ್ನಂ ಅವರ ಅನುವಾದದ ಭಾಷಾ ಶೈಲಿಗಳು ಬಲು ಸರಳವಾಗಿದ್ದು ಬೌದ್ಧ ಸಾಹಿತ್ಯದ ಗಹನವಾದ ವಿಚಾರಗಳು ಕೂಡಾ ಜನಸಾಮಾನ್ಯರಿಗೆ ಅರ್ಥವಾಗುವಂತಿವೆ. ಆದುದರಿಂದ ಶ್ರೀಯುತರ ಕಾರ್ಯ ತುಂಬಾ ಫಲಕಾರಿಯಾಗಿವೆ ಎನ್ನಬಹುದು. ಈಗಿರುವ ಅನುವಾದಗಳಲ್ಲಿ ಸಂಪೂರ್ಣ ಸಫಲತೆ ಕಂಡುಬಾರದಿರಲು ಅನುವಾದಕರ ಅಸಾ ಮರ್ಥ್ಯ — ಅನುವಾದಿಸಲ್ಪಡುವ ಕನ್ನಡ ಮತ್ತು ಮೂಲಭಾಷೆ — ಈ ಎರಡರಲ್ಲಿ ಸರಿಯಾದ ಹಿಡಿತವಿಲ್ಲದಿರುವುದು — ಕಾರಣವಾಗಿದೆ. ಇಷ್ಟರ ವರೆಗೂ ನಡೆದ ಕನ್ನಡದ ಅನುವಾದಗಳಲ್ಲಿ ಭಾಷಾ ಶೈಲಿಗಳ ದೃಷ್ಟಿಯಿಂದ ಉತ್ತಮ ತರದವುಗಳಿಗಿಂತ ಮಧ್ಯಮ ತರದ ಅನು ವಾದಗಳೇ ಅಧಿಕವಾಗಿವೆ. ಮೂಲಗ್ರಂಥಕಾರನ ವಿಚಾರ ಭಾವನೆ ಗಳನ್ನು ಸರಿಯಾಗಿ ತಿಳಿದುಕೊಂಡರೂ ಅವನ್ನು ಕನ್ನಡಕ್ಕಿಳಿಸುವ ಶಕ್ತಿಇಲ್ಲದಿರುವುದೂ ಅನುವಾದದ ಅಸಫಲತೆಗೆ ಮುಖ್ಯಕಾರಣಗಳು.

ಇನ್ನು ಸಂಶೋಧನಾತ್ಮಕ ಗದ್ಯದ ವಿಚಾರ. ಸಂಶೋಧನಾ ತ್ಮಕ ಗದ್ಯಕ್ಕೆ ಅಸ್ತಿವಾರ ಹಾಕಿ ಗದ್ಯಮಂದಿರದ ಆ ವಿಭಾಗವನ್ನು ಕಟ್ಟುತ್ತಲೇ ಮುಂದುವರಿಯುತ್ತಿರುವವರಲ್ಲಿ ಶ್ರೀ। ಮಂಜೇಶ್ವರ ಗೋವಿಂದ ಪೈಗಳ ಹೆಸರೇ ಮೊದಲನೆಯದು. ಅವರ ಭಾಷಾ ಶೈಲಿಗಳಿಗೆ ನಮ್ಮ ಗದ್ಯ ಸಾಹಿತ್ಯದಲ್ಲಿ ಅದೊಂದು ವಿಶಿಷ್ಟವಾದ

ಸ್ಥಾನವಿದೆ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಶ್ರೀ। ಗೋವಿಂದ ಪೈಗಳ ಗದ್ಯ ಸಾಮಾನ್ಯ ಜನಕ್ಕಾಗಿ ಬರೆದ ಗದ್ಯವಲ್ಲ. ಭಾಷಾ ಶುದ್ಧತೆ ಗಾಂಭೀರ್ಯ ಘನತೆಗಳು ಶ್ರೀಯುತರ ಗದ್ಯದ ಬೆನ್ನೆಲುಬುಗಳಾಗಿವೆ. ಸಂಶೋಧನಾತ್ಮಕ ಗದ್ಯದ ನಿರ್ಮಾಣ ಕಾರ್ಯದಲ್ಲಿ ಶ್ರೀ। ಪೈಗಳಂತೆ ದುಡಿಯುವವರು ಇನ್ನೊಬ್ಬರಿಲ್ಲ ವೆಂದರೂ ಹೆಚ್ಚಾಗದು. ಹೊಸಗನ್ನಡ ಗದ್ಯದ ಈ ವಿಭಾಗದಲ್ಲಿ ದಿವಂಗತ ಆರ್. ನರಸಿಂಹಾಚಾರ್ಯರೂ, ಶ್ರೀ। ವೆಂಕಟಸುಬ್ಬಯ್ಯ ನವರೂ, ರಾಜಪುರೋಹಿತರೂ, ಶಂ. ಬಾ. ಜೋಶಿಯವರೂ ತುಂಬಾ ದುಡಿದಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲ ದಲ್ಲಿ ಪ್ರಾರಂಭವಾದ ಪುರಾಣ ಸಾಹಿತ್ಯದ ಗದ್ಯಾನುವಾದದ ಕಾರ್ಯ ಇನ್ನೂ ನಡೆಯುತ್ತಲೇ ಇದ್ದು ಆ ವಿಭಾಗ ಬೆಳೆಯು ತ್ತಿದೆ. ಆ ವಿಭಾಗದಲ್ಲಿ ದಿವಂಗತ ಅಳಸಿಂಗಾಚಾರ್ಯರನ್ನೂ ಮೋಟಿಗಾನ ಹಳ್ಳಿ ರಾಮಶೇಷ ಶಾಸ್ತ್ರಿಗಳನ್ನೂ ಮರೆಯಲಾಗದು. ಹಾಗೆಯೇ ಆಯುರ್ವೇದ ಗ್ರಂಥಗಳನ್ನು ಕನ್ನಡ ಗದ್ಯದಲ್ಲಿ ಬರೆದ ದಿವಂಗತ ಪಣಂಬೂರು ರಾಮಕೃಷ್ಣಯ್ಯನವರನ್ನೂ, ಚರಕವಾಗ್ಭ ಟಾದಿಗಳ ಕೃತಿಗಳನ್ನು ಕನ್ನಡಕ್ಕಿಳಿಸಿದ ಶ್ರೀ। ಆದ್ಯ ಅನಂತಾಚಾ ರ್ಯರನ್ನೂ ಇಲ್ಲಿ ಸೂಚಿಸಬೇಕಾಗಿದೆ. ಇನ್ನು ನಮ್ಮ ಗದ್ಯ ಸಾಹಿತ್ಯದಲ್ಲಿ ಶಾಸ್ತ್ರೀಯ ಗ್ರಂಥಗಳ ಕುರಿತು ಒಂದು ಮಾತು. ಸುಯೋಗ್ಯ ಶಾಸ್ತ್ರೀಯ ಗ್ರಂಥಗಳು ಇನ್ನೂ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ತಲೆದೋರಿಲ್ಲ. ವಿಜ್ಞಾನವೇ ಮೊದಲಾದ ವಿವಿಧ ಶಾಸ್ತ್ರ ಗಳಲ್ಲಿ ನಿಷ್ಣಾತರಾದ ಕನ್ನಡಿಗ ವಿದ್ವಾಂಸರ ಉಪೇಕ್ಷೆಯೇ ಇದಕ್ಕೆ ಕಾರಣ. ಅಲ್ಪ ಸ್ವಲ್ಪ ಬರೆದರೂ ಅದು ಜನತೆಗೆ ಅರ್ಥವಾಗು ವಂತಿಲ್ಲ. ಮೈಸೂರು ವಿಶ್ವವಿದ್ಯಾನಿಲಯದವರೇನೋ ಈ ಕಾರ್ಯ ದಲ್ಲಿ ಅಡಿ ಇರಿಸಿದ್ದಾರೆ. ಈ ವರೆಗೆ ಪ್ರಕಟವಾದ ಶಾಸ್ತ್ರೀಯ

ಗ್ರಂಥಗಳು ಗದ್ಯ ಭಾಷಾಶೈಲಿಗಳ ಕಠಿನತೆಯಿಂದಾಗಿ ಜನಸಾಮಾನ್ಯರ ಕೈಗೆಟುಕುವಂತೆ ತೋರುವುದಿಲ್ಲ. ಕೆಲವು ಗ್ರಂಥಗಳ ಗದ್ಯಗಳಂತೂ ಪರಭಾಷೆಯ ಕನ್ನಡ ರೂಪಗಳಂತಿವೆ. ಇನ್ನು ಚರಿತ್ರಾತ್ಮಕ ಗದ್ಯವೂ ನಮ್ಮ ನುಡಿಯಲ್ಲಿ ಬೆಳೆದುದು ಸಾಲದು. ಈ ವಿಭಾಗದಲ್ಲಿ ತ್ವರೆಯಿಂದ ಕೆಲಸ ಸಾಗಬೇಕಾಗಿದೆ ಎಲ್ಲದಕ್ಕಿಂತಲೂ ಮೊದಲು ನಮ್ಮ ಗದ್ಯ ನಿರ್ಮಾಪಕರು ಪಠ್ಯ ಪುಸ್ತಕಗಳ ಗದ್ಯದ ಕಡೆಗೆ ಹೆಚ್ಚಿನ ಗಮನಕೊಡಬೇಕಾದುದು ಅತ್ಯಾವಶ್ಯಕವಾಗಿದೆ. ಪಠ್ಯ ಪುಸ್ತಕಗಳೆಂದರೆ ಇಂದಿನ ಮಕ್ಕಳನ್ನು ಮುಂದಿನ ಜನಾಂಗವಾಗಿಸುವ ಸಾಧನೆಗಳೆಂಬುದನ್ನು ಮರೆಯಲಾಗದು. ಇಂದಿನ ಪಠ್ಯಪುಸ್ತಕಗಳ ಭಾಷಾ ಶೈಲಿಗಳು ಸಂಪೂರ್ಣವಾಗಿ ಅಲ್ಲದಿದ್ದರೂ ಹೆಚ್ಚಾಗಿ ಪ್ರಾಂತಭೇದಗಳಿಂದ ತುಂಬಿವೆ. ಆದುದರಿಂದ ಮೊದಲಾಗಿ ನಮ್ಮ ಪಠ್ಯಪುಸ್ತಕಗಳ ಗದ್ಯ ಪರಿಮಾರ್ಜಿತವಾಗಬೇಕು. ಮುಂದಿನವರ ಭಾಷಾಶುದ್ಧತೆಗೆ ಪಠ್ಯಪುಸ್ತಕಗಳೇ ಅಡಿಗಲ್ಲುಗಳಾಗಿವೆ. ಶ್ರೀಗಳಾದ ಕಾರಂತ, ಮಾಳವಾಡರಂತೆ ನಮ್ಮ ಹಿರಿಯ ಗದ್ಯ ಲೇಖಕರಲ್ಲಿ ಕೆಲವರಾದರೂ ಪಠ್ಯಪುಸ್ತಕಗಳ ರಚನೆಯ ಕಡೆಗೆ ಗಮನವೀಯಬೇಕಾದುದು ಅತ್ಯಾವಶ್ಯಕವಾಗಿದೆ. ಪಠ್ಯ ಪುಸ್ತಕಗಳ ವಿಷಯ ನಿರೂಪಣೆಯಲ್ಲಿಯೂ ಹಾಗೆಯೇ; ವಿಷಯಗಳು ಅಖಿಲ ಕರ್ಣಾಟಕದದೃಷ್ಟಿಯಿಂದಲೂ, ಅಖಿಲ ಭಾರತದ ದೃಷ್ಟಿಯಿಂದಲೂ ನಿರೂಪಿತವಾಗಿರಬೇಕಲ್ಲದೆ ಪ್ರಾಂತ ಭೇದದ ಸಂಕುಚಿತ ದೃಷ್ಟಿಗೆ ಅಲ್ಲಿ ಎಡೆ ಇರಬಾರದು. ಕನ್ನಡ ಪಠ್ಯ ಪುಸ್ತಕಗಳ ರಚನೆಯಲ್ಲಿ ಪ್ರಗತಿಯ ದಾರಿ ಕಂಡು ಅದಕ್ಕನುಗುಣವಾಗಿ ಪಠ್ಯಪುಸ್ತಕ ನಿರ್ಮಾಣ ಮಾಡಿದವರಲ್ಲಿ ಶ್ರೀ। ಶಿವರಾಮ ಕಾರಂತರ ಹೆಸರೇ ಮೊದಲನೆಯದೆನ್ನಬಹುದು. ಅವರಿಂದ ರಚಿತವಾದ ಪಠ್ಯಪುಸ್ತಕಗಳಲ್ಲಿ ಪ್ರಾಂತ ಭೇದದ ಸಂಕುಚಿತ ದೃಷ್ಟಿಯಾ

ಗಲೀ ಭಾಷಾ ಭೇದವಾಗಲೀ ಕಂಡುಬರುವುದಿಲ್ಲ. ಬಾಲಸಾಹಿತ್ಯದ ಗದ್ಯ ನಿರ್ಮಾಣ ಕಾರ್ಯದಲ್ಲಿ ಆವರಿಸಿಗಿದ ಅತ್ಯಂತ ಮಹತ್ವದ ಕಾರ್ಯವೆಂದರೆ 'ಬಾಲ ಪ್ರಪಂಚ'ದ ರಚನೆ. 'ಬಾಲ ಪ್ರಪಂಚ' ದಂತಹ ಬೃಹತ್ ಗದ್ಯಕೃತಿ ಭಾರತೀಯ ಭಾಷೆಗಳಲ್ಲಿಯೇ ವಿರಳ ವಾಗಿದೆ ಎನ್ನಲೂ ಬಹುದು.

ಈಗ ಹೊಸಗನ್ನಡ ಗದ್ಯಯುಗ ಆರಂಭವಾಗಿದೆಯಷ್ಟೆ. ಆರಂಭ ವನ್ನು ಪರಿಶೀಲಿಸಿದರೆ ಮುಂದಿನ ಕಾಲ ಉಜ್ವಲವಾಗಿ ಕಾಣುವು ದೇನೋ ಸರಿಯೆ. ಅದನ್ನು ಉಜ್ವಲವಾಗಿಸುವ ಇಲ್ಲವೆ ಮುಸು ಕಿಸುವ ಹೊಣೆಗಾರಿಕೆ ಇಂದಿನವರಾದ ನಮ್ಮ ಮೇಲೆ ಹೊಂದಿ ಕೊಂಡಿದೆ. ಅದಕ್ಕಾಗಿ ನಾವೀಗ ಬಹು ಪರಿಶ್ರಮದಿಂದ ದುಡಿಯ ಬೇಕು. ಎಲ್ಲಕ್ಕಿಂತಲೂ ಮೊದಲು ಇಂದಿನ ನಮ್ಮ ಅಂಧಾನುಸರಣ ಬುದ್ಧಿ ಅಳಿಯಬೇಕು. ಕಳೆದ ಐವತ್ತು ವರ್ಷಗಳಿಂದ ಸಾಮೂ ಹಿಕವಾಗಿ ಅಲ್ಲದಿದ್ದರೂ ಹಲಕೆಲವು ವಿಭಾಗಗಳಲ್ಲಿ ನಮ್ಮ ಗದ್ಯ ಸಾಹಿತ್ಯ ಸಾಕಷ್ಟು ಪ್ರಗತಿಯನ್ನೈದಿತಾದರೂ ಈಗ ತಪ್ಪು ದಾರಿ ಹಿಡಿಯುವ ಚಿಹ್ನೆ ಕಾಣಬರುತ್ತಿದೆ. ಇಂದಿನ ಗದ್ಯ ನಿರ್ಮಾಪಕ ರಲ್ಲಿ ಕಾಣಬರುವ ಅಭ್ಯಾಸದ ಅಭಾವವೂ, ಸಂಕುಚಿತ ಮನೋ ವೃತ್ತಿಯೂ ಇದಕ್ಕೆ ಕಾರಣ. ಸಾಹಿತ್ಯ ಕ್ಷೇತ್ರದಲ್ಲಿ ಯಾವ ಸಂಕುಚಿತ ಭಾವನೆಗೂ ಎಡೆ ಇರಬಾರದು. ಸಾಹಿತ್ಯ ಆದರ್ಶ ವಾಗಿದ್ದು ಮುಂದಿನ ಜನಾಂಗಕ್ಕೆ ಮಾರ್ಗದರ್ಶಕವಾಗಿರಬೇಕು. ಕೇವಲ ಆನಂದಾನುಭವವೊಂದನ್ನೇ ಸಾಧಿಸುವುದು ಇಂದಿನ ಸಾಹಿತ್ಯ ನಿರ್ಮಾಣದ ಉದ್ದೇಶವಲ್ಲ. ರಾಷ್ಟ್ರಪರಿವರ್ತನೆಯ ಜನಾಂಗ ನಿರ್ಮಾಣದ ಈ ಸಂಧಿಕಾಲದಲ್ಲಿ ಆ ಹೊಣೆಗಾರಿಕೆ ನಮ್ಮ ಸಾಹಿತಿಗಳ-ಅದರಲ್ಲಿಯೂ ಗದ್ಯ ನಿರ್ಮಾತೃಗಳ ಕೈಯಲ್ಲಿದೆ. ಏಕೆಂದರೆ ಸಾಮಾನ್ಯ ಜನತೆಯ ಮೇಲೆ ಪರಿಣಾಮಕಾರಿಯಾಗು

ವುದು ಗದ್ಯವಲ್ಲದೆ ಪದ್ಯವಲ್ಲ. "ಕರ್ಣಾಟಕ ಗತವೈಭವ", "ಧರ್ಮ ಸಂಭವ", "ಬಾಳ್ವೆಯೇ ಬೆಳಕು" ಮುಂತಾದ ಕೃತಿರತ್ನಗಳಂತಹ ಗದ್ಯಗ್ರಂಥಗಳು ವಿಪುಲವಾಗಿ ಹೊರಬರಬೇಕು. ನಮ್ಮ ಸಣ್ಣ ಕತೆಗಳು, ಏಕಾಂಕಗಳು, ಕಾದಂಬರಿಗಳು ಕೇವಲ ಹೆಣ್ಣುಗಂಡಿನ ಒಲವನ್ನಷ್ಟೆ ಚಿತ್ರಿಸುತ್ತಾ ಮುಂದುವರಿದರೆ ಸಾಲದು; ಇಲ್ಲವೆ ಜನ ಜೀವನವನ್ನು ಮಾತ್ರ ಚಿತ್ರಿಸುತ್ತಾ ಬೆಳೆದರೂ ಸಾಲದು. ಕ್ರಾಂತಿ ಕಾರಕ ವಿಚಾರಗಳ--ನಮ್ಮ ಜನಾಂಗದ ಭವಿಷ್ಯ ಜೀವನ ಹೇಗೆ ಬೆಳೆಯಬೇಕೆಂಬ ವಿಚಾರವನ್ನು ಕೆರಳಿಸುವ ಕತೆ ಕಾದಂಬರಿಗಳು, ಪ್ರಬಂಧ ಉಪನ್ಯಾಸಗಳು ಸೃಷ್ಟಿಯಾಗಬೇಕು. ನಮ್ಮಲ್ಲಿ ಎಳೆ ಹರೆಯದ ಹೊಸ ಹುರುಪಿನ ತರುಣ ಗದ್ಯಲೇಖಕರಿಗೇನೂ ಕಡಿಮೆ ಯಿಲ್ಲ. ಅವರೆಲ್ಲ ಈಗ ತಮ್ಮ ಪ್ರತಿಭೆಯನ್ನು ನೂತನ ಜನಾಂಗ ನಿರ್ಮಾಣಕ್ಕೆ ಸಾಧನವಾದ ಗದ್ಯ ನಿರ್ಮಾಣದಲ್ಲಿ ವ್ಯಯಿಸಬೇಕು. ಬೆರಳೆಣಿಕೆಯ ಕೆಲವೇ ಮಂದಿ ತರುಣ ಗದ್ಯಲೇಖಕರು—ಕುಳು ಕುಂದ ಶಿವರಾಯ, ಹಿರೇ ಮಲ್ಲೂರ ಈಶ್ವರನ್, ಅರ್ಚಿಕ ವೆಂಕಟೇಶ, ಎಸ್. ಅನಂತನಾರಾಯಣ, ನಾಡಿಗೇರ, ಭಾರತೀಸುತ, ಮಿರ್ಜಿ ಅಣ್ಣಾರಾಯ, ಇನಾಂದಾರ—ಮುಂತಾದವರು ಈ ದಾರಿ ಯಲ್ಲಿ ಮುಂದುವರಿಯುತ್ತಿರುವುದು ಆನಂದದ ಸಂಗತಿ. ಇವರಂತೆ ಗದ್ಯಕ್ಷೇತ್ರದಲ್ಲಿ ಇನ್ನೂ ತಲೆಯೆತ್ತುತ್ತಿರುವ—ತಲೆ ಎತ್ತಿದ ತರುಣ ಗೆಳೆಯರು ಆಳವಾದ ಅಭ್ಯಾಸದೊಂದಿಗೆ ಪರಿಮಾರ್ಜಿತವಾದ ಕ್ರಾಂತಿಕಾರಕ ಗದ್ಯನಿರ್ಮಾಣದಲ್ಲಿ ಪ್ರವೃತ್ತರಾಗಬೇಕು; ಮಾತು ಬಿಟ್ಟು ಕೃತಿಗಿಳಿಯಬೇಕು.

ನಮ್ಮ ಅಕ್ಕತಂಗಿಯರು ಗದ್ಯಕ್ಷೇತ್ರದ ಕಥಾವಿಭಾಗದಲ್ಲಿ ತುಸು ಮಟ್ಟಿಗೆ ದುಡಿಯುತ್ತಿರುವರಾದರೂ ಅವರ ಮುನ್ನಡೆ ಏನೇನೂ ಸಾಲದು. ದಿವಂಗತ ಗೌರಮ್ಮ, ಶ್ರೀಮತಿ ಕಲ್ಯಾಣಮ್ಮ, ಸರಸ್ವತೀ

ಬಾಯಿ ರಾಜವಾಡೆ, ಜಯಲಕ್ಷ್ಮೀ ಶ್ರೀನಿವಾಸನ್, ಶ್ರೀಮತಿ ಮಾಳವಾಡ—ಇವರೆಲ್ಲರಂತೆ ಕನ್ನಡ ಸೋದರಿಯರು ಮುಂದೆ ಬಂದು ಸಮಾಜ, ರಾಷ್ಟ್ರಸಂಬಂಧಿಗಳಾದ ಹಲವಾರು ವಿಷಯಗಳನ್ನೆತ್ತಿಕೊಂಡು ಗದ್ಯನಿರ್ಮಾಣ ಕಾರ್ಯದಲ್ಲಿ ಪ್ರವೃತ್ತರಾಗಬೇಕು. ಸ್ತ್ರೀ ಹೃದಯದಿಂದ ಹೊರಹೊಮ್ಮಿದ ಸುಲಲಿತ ಮೃದು ಗದ್ಯವೂ ನಮ್ಮ ಸಾಹಿತ್ಯಕ್ಕೆ ಅತ್ಯಗತ್ಯ. ಕನ್ನಡದ ಅಣ್ಣತಮ್ಮ ಅಕ್ಕತಂಗಿಯರೊಂದಾಗಿ ಸೊಂಟಕಟ್ಟಿ ದುಡಿದರೆ ನಮ್ಮ ಗದ್ಯಸಾಹಿತ್ಯ ಪ್ರಗತಿಯ ದಾರಿಯಲ್ಲಿಯೇ ಅಡಿಇಡುತ್ತ ಹೋಗುವುದರಲ್ಲೇನೂ ಸಂಶಯವಿಲ್ಲ.

---

೩

# ಕಥೆಗಳ ಮೂಲಸ್ಥಾನ

ಭಾರತವರ್ಷವು ಜಗತ್ತಿಗೆ ಕೊಟ್ಟ ಜ್ಞಾನದ ಕಥೆಯು ಮನರಂಜಕವೂ, ಆಶ್ಚರ್ಯಜನಕವೂ ಆಗಿದೆ. ಇದರಲ್ಲಿ ಕಥಾಸಾಹಿತ್ಯದ ಇತಿಹಾಸವು ಎಲ್ಲಕ್ಕಿಂತಲೂ ಮನೋಹರವಾಗಿದೆ. ಭಾರತೀಯ ಕಥಾ ಸಾಹಿತ್ಯವು ಸಮಗ್ರ ಜಗತ್ತಿನಲ್ಲಿಯೂ ಹಬ್ಬಿಕೊಂಡಿದೆ. ಈ ಮಾತಿಗೆ, ಕಥಾಸಾಹಿತ್ಯದಲ್ಲಿ ವಿಶೇಷಜ್ಞನಾದ ಬೇನಫಿಯು 'ಮೂರು ಲೋಕದ ಎಲ್ಲಾ ಕಥೆಗಳಿಗೂ ಮೂಲಸ್ಥಾನವು ಭಾರತವರ್ಷವು' ಎಂದು ತನ್ನ ಪಂಚತಂತ್ರದ ಭೂಮಿಕೆಯಲ್ಲಿ ೧೮೫೯ರಲ್ಲಿ ಬರೆದಿರುವನು. ಅಂದಿನಿಂದ ಇಂದಿನವರೆಗೆ ಅನೇಕ ಪ್ರಕಾರದ ಶೋಧಗಳನ್ನು ನಡೆಸಿ ವಿದ್ವಾಂಸರು ಇದರ ಪಕ್ಷವಿಪಕ್ಷಗಳಲ್ಲಿ ಅನೇಕ ತರ್ಕ ಪ್ರಮಾಣಗಳನ್ನು ತಂದರು. ಆದರೆ ಎಲ್ಲರೂ 'ಭಾರತೀಯ ಕಥಾ ಸಾಹಿತ್ಯದ ಪ್ರಭಾವವು ಪ್ರಪಂಚದ ಸಾಹಿತ್ಯದ ಮೇಲೆ ಬಿದ್ದಿದೆ' ಎಂದು ಒಪ್ಪಿಕೊಂಡಿದ್ದಾರೆ. ಪಾಶ್ಚಾತ್ಯ ಸಮಾಜ ಮಾತ್ರ ಪ್ರಭಾವಿತವಾದುದಲ್ಲ; ಸಮಗ್ರ ಏಷ್ಯವೂ ಆಫ್ರಿಕವೂ ಈ ವಿಷಯದಲ್ಲಿ ಭಾರತವರ್ಷದ ಶಿಷ್ಯತ್ವವನ್ನು ಸ್ವೀಕರಿಸಿವೆ. ಈ ವಿಷಯದ ಅಧ್ಯಯನವು ಕಥೆಗಳಷ್ಟೇ ಮನರಂಜಕವಾಗಿದೆ.

ಪಂಚತಂತ್ರದ ಇತಿಹಾಸವು ಎಲ್ಲಕ್ಕಿಂತಲೂ ಮನರಂಜಕವಾದುದು. ಭಾರತೀಯ ಜ್ಞಾನದ ಇತರ ಯಾವ ಗ್ರಂಥಗಳೂ ಇಷ್ಟು ಲೋಕಪ್ರಿಯವಾಗಿಲ್ಲ. ಸನ್ಯಾಸಿಗಳು, ವ್ಯಾಪಾರಿಗಳು, ಯಾತ್ರಿಕರು, ಸೈನಿಕರು ಮೊದಲಾದವರ ಮೂಲಕ ನಾನಾ ಭಾಷೆ, ನಾನಾರೂಪ, ನಾನಾ ಪ್ರಕಾರಗಳಲ್ಲಿ ಪಂಚತಂತ್ರವು ಪ್ರಪಂಚದ

ಮೂಲೆ ಮೂಲೆಗೂ ಹರಡಿದೆ. ಪಂಚತಂತ್ರದ ಅನುವಾದವಾಗದೆ ಇರುವ ಲಿಖಿತ ಭಾಷೆಯೇ ಇಲ್ಲವೆಂದರೂ ಹೆಚ್ಚಾಗದು. "ಈ ಗ್ರಂಥವು ಏಷ್ಯದಿಂದ ಯುರೋಪಿಗೂ, ಹಾಗೆಯೇ ಆಫ್ರಿಕದ ಸುಮಾಲೀ ಮತ್ತು ಸೌಹಿಲೀ ಕಿನಾರೆಯುವರೆಗೂ ಒಂದು ಜಾತಿಯಿಂದ ಇನ್ನೊಂದು ಜಾತಿಯ ಮೂಲಕ ಯಾತ್ರೆಮಾಡಿದೆ." ಎಂದು ವಿಂಟರ್‌ನಿಜ್ಜರು ಹೇಳುತ್ತಾರೆ. ವೇನಫಿಯು ವಿದ್ವಾಂಸರ ಧ್ಯಾನವನ್ನು ಈ ಗ್ರಂಥದ ಕಡೆಗೆ ಸೆಳೆದಂದಿನಿಂದ ವಿದ್ವಾಂಸರಿಗೆ ತುಲನಾತ್ಮಕ ಸಾಹಿತ್ಯಿಕ ಅಧ್ಯಯನದಲ್ಲಿ ಅಭಿರುಚಿ ಹುಟ್ಟಿ ಸಂಶೋಧನಾ ಸಂಬಂಧಿಯಾದ ಒಂದು ಹೊಸ ಶಾಖೆಯು ಉತ್ಪನ್ನವಾಯಿತು. ಈ ಗ್ರಂಥರತ್ನಕ್ಕೆ ಒಂದು ಹೊಸ ಶಾಸ್ತ್ರದ (ಸಾಹಿತ್ಯದ ತುಲನಾತ್ಮಕ ಇತಿಹಾಸದ) ಅಸ್ತಿವಾರವನ್ನು ಹಾಕಿದ ಶ್ರೇಯಸ್ಸು ವೇನಫಿಗೆ ದೊರಕಿದೆ.

ಪಂಚತಂತ್ರವನ್ನು ಕ್ರಿ. ಶ. ೫೩೧—೫೭೧ ವರೆಗೆ ಆಳಿದ ಪರ್ಶಿಯದ ನೌಶೇರವಾಂ ಬಾದಶಹನು ಪಹಲವೀ ಭಾಷೆಗೆ ಹಕೀಮ್ ವರಜೋ ಎಂಬವನಿಂದ ಪರಿವರ್ತನೆ ಮಾಡಿಸಿದನು. ಈ ಅನುವಾದದಲ್ಲಿ ಕೇವಲ ಪಂಚತಂತ್ರವನ್ನು ಮಾತ್ರವಲ್ಲದೆ ಇತರ ಕೆಲವು ಭಾರತೀಯ ಕಥೆಗಳನ್ನೂ ಪರಿವರ್ತನೆ ಮಾಡಿಸಿದ್ದನು. ನಮ್ಮ ದುರ್ಭಾಗ್ಯದಿಂದ ಈ ಪಹಲವೀ ಅನುವಾದವು ಇನ್ನೂ ದೊರಕಿರುವುದಿಲ್ಲ. ಆದರೆ ಇದರ ಅರಬೀ ಮತ್ತು ಸಿರಿಯನ್ ಭಾಷೆಗಳ ಅನುವಾದಗಳು ದೊರಕಿವೆ. ೫೭೦ರಲ್ಲಿ ಕ್ರಿಶ್ಚಿಯನ್ ಪಾದರಿಯೊಬ್ಬನು ಕಲಿಲಗ್ (ಕರಟಕ) ಮತ್ತು ದಮನಗ್ (ದಮನಕ) ಎಂಬ ಪೆಸರಿನಿಂದ ಪಂಚತಂತ್ರವನ್ನು ಸಿರಿಯನ್ ಭಾಷೆಗೆ ಪರಿವರ್ತಿಸಿದನು.

ಅರಬರು ಇತರ ವಿದ್ಯೆಗಳಂತೆ ಪಂಚತಂತ್ರವನ್ನು ಕೂಡ

ಯುರೋಪಿಗೆ ಕೊಂಡೊಯ್ದರು. ಪಂಚತಂತ್ರದ ಯುರೋಪಿನಲ್ಲಾದ ಅನುವಾದಗಳಲ್ಲಿ ಹೆಚ್ಚಿನವುಗಳೆಲ್ಲಾ ಅರಬಿಯಿಂದ ಅನುವಾದಿಸಲ್ಪಟ್ಟವುಗಳು. ಪಂಚತಂತ್ರವನ್ನು ಅರಬಿಯಿಂದ ಜರ್ಮನ್ ಭಾಷೆಗೆ ಪರಿವರ್ತಿಸಿದ ಉಲ್ಫನು "ಲೋಕದಲ್ಲಿ ಅಧಿಕಭಾಷೆಗಳಲ್ಲಿ ಅನುವಾದಿಸಲ್ಪಟ್ಟ ಗ್ರಂಥಗಳಲ್ಲಿ ಬೈಬಲನ್ನು ಬಿಟ್ಟರೆ ಮತ್ತಿನ ಸ್ಥಾನವು ಪಂಚತಂತ್ರಕ್ಕೆ ದೊರೆಯಬೇಕು" ಎಂದಿದ್ದಾನೆ. ಈ ಅನುವಾದದಲ್ಲಿ ಮಹಾಭಾರತದ ಕೆಲವು ಕಥೆಗಳ ಮತ್ತು ಬುದ್ಧ ಜಾತಕದ ಕೆಲವು ಕಥೆಗಳ ಅನುವಾದವು ಕೂಡ ಸೇರಿದೆ. ಇವು ಪಹಲವೀ ಭಾಷೆಗೆ ಪಂಚತಂತ್ರವನ್ನನುವಾದಿಸುವಾಗಲೇ ಅನುವಾದಿಸಲ್ಪಟ್ಟ ಕಥೆಗಳಾಗಿವೆ

ಅರಬೀ ಅನುವಾದದ ಆಧಾರದಿಂದ ಹನ್ನೆರಡನೇ ಶತಮಾನದಲ್ಲಿ ಗ್ರೀಕಿಗೆ ಪಂಚತಂತ್ರವನ್ನು ಪರಿವರ್ತಿಸಿದರು. ಪಂಚತಂತ್ರವು ಗ್ರೀಕಿನಿಂದ ಇಟಲಿ, ಜರ್ಮನ್, ಸ್ಲೈವೋಕಿಯಾ ಮತ್ತು ಲೆಟಿನ್ ಭಾಷೆಗಳಲ್ಲಿ ಅನುವಾದಿಸಲ್ಪಟ್ಟಿತು. ಹನ್ನೊಂದನೇ ಶತಮಾನದಲ್ಲಿ ರೋವೀ ಜೋವಿಲ್ ಎಂಬವನು ಪಂಚತಂತ್ರವನ್ನು ಹಿಬ್ರೂ ಭಾಷೆಗೆ ಅನುವಾದಿಸಿದನು. ಈ ಹಿಬ್ರೂ ಅನುವಾದದ ಪರಿವರ್ತನೆಯೊಂದು ಲೆಟಿನಿನಲ್ಲಿ ಕೂಡ ಆಯಿತು. ಈ ಲೆಟಿನಿನ ಅನುವಾದದಿಂದ ಜರ್ಮನಿಗೊಂದು ಅನುವಾದವಾಯಿತು. ಜರ್ಮನಿಯಲ್ಲಿ ಮೊಟ್ಟಮೊದಲು ಮುದ್ರಿಸಲ್ಪಟ್ಟ ಗ್ರಂಥಗಳಲ್ಲಿ ಇದು ಕೂಡ ಒಂದಾಗಿದೆ. ಈ ಮುದ್ರಿತವಾದ ಅನುವಾದವು ಲೋಕಪ್ರಿಯವಾಗಿ ಜರ್ಮನಿಯ ಅನೇಕ ಸಾಹಿತ್ಯಿಕ ಕೃತಿಗಳ ಮೇಲೆ ಪ್ರಭಾವವನ್ನು ಹಾಕಿತು. ಈ ಜರ್ಮನ್ ಅನುವಾದದಿಂದ ಯುರೋಪಿನ ಇತರ ಕೆಲವು ಭಾಷೆಗಳಲ್ಲಿ ಕೂಡ ಅನುವಾದವಾಯಿತು.

ಪಂಚತಂತ್ರವು ಯುರೋಪಿನಿಂದಲೇ ಈಜಿಪ್ಟಿಗಾಗಿ ಆಫ್ರಿಕಕ್ಕೆ

ಹೋಯಿತು. ಮಧ್ಯಯುಗದಲ್ಲಿ ಇದು ಜನಪ್ರೀತ ಗ್ರಂಥಗಳ ಲ್ಲೊಂದಾಯಿತು. ಈ ಗ್ರಂಥವು ಚೀನ, ತುರ್ಕಿಸ್ಥಾನಗಳಿಗೆ ಹೇಗೆ ಹೋಯಿತೆಂದು ಸ್ಪಷ್ಟವಾದ ಆಧಾರಗಳಿಂದ ಗೊತ್ತಾಗುವದಿಲ್ಲ. ಬಹುಶಃ ಇದು ಪಹಲವೀ ಅನುವಾದದಿಂದಲೇ ಅಲ್ಲಿಗೂ ಪರವಿರ ಬೇಕು. ಈ ರೀತಿ ಉತ್ತರಕ್ಕೆ ತುರ್ಕಿಸ್ತಾನ ಮತ್ತು ಪೂರ್ವಕ್ಕೆ ಜಪಾನಿನವರೆಗೂ ಹರಡಿತು. ದಕ್ಷಿಣದಲ್ಲಿ ಜಾವಾ, ಸುಮಾತ್ರಾ ಮೊದಲಾದ ದ್ವೀಪಗಳಿಗೂ ಹೋಯಿತು. "ಜಾವಾ ಮೊದಲಾದ ಕಡೆಯ ಪಂಚತಂತ್ರವು ಕನ್ನಡದ ದುರ್ಗಸಿಂಹನ ಪಂಚತಂತ್ರಕ್ಕೆ ಸರಿಯಾಗಿ ಹೋಲುತ್ತದೆ." ಎಂದು ಡಾ। ವೆಂಕಟ ಸುಬ್ಬಯ್ಯನವರ ಮತವಾಗಿದೆ.

ಲೆಟಿನಿನ ಸತ್ಪುರುಷರ ಕಥಾ ಸಂಗ್ರಹವೂ, ಫ್ರಾನ್ಸಿನ ಉಪಾಖ್ಯಾನಮಾಲೆಗಳೂ, ಇಟಲಿಯ ಕಥೆ ಹೇಳುವ 'ಒಕೆಸಿಓನ' ಮತ್ತು 'ಸ್ಟ್ರಾಪೆರೋಲಾ' ಮೊದಲಾದವರ ಕಥೆಗಳೂ, ಜರ್ಮನಿಯ ಪಾರಿವಾರಿಕ ಕಥೆಗಳೂ, ಪಂಚತಂತ್ರದ ಪ್ರಭಾವದಿಂದಲೇ ಹುಟ್ಟಿದವುಗಳೆಂದು ಕೆಲವರ ಅಭಿಪ್ರಾಯವಾಗಿದೆ. ಈ ಪಂಚತಂತ್ರವು ಪೂರ್ವ ಪಶ್ಚಿಮ ದೇಶಗಳನ್ನು ಒಂದುಗೂಡಿಸಿ ಎರಡು ದೇಶಗಳ ಕಷ್ಟಸುಖಗಳೂ ಒಂದೇ ಎಂಬುದನ್ನು ತೋರಿಸಿ ಪರಸ್ಪರ ವಿನಿಮಯಕ್ಕಾಗಿ ಕಟ್ಟಿದ ಮಹಾ ಸೇತುವೆಯಂತಿದೆ.

ಮಹಾಭಾರತದ 'ನಳದಮಯಂತಿ ಕಥೆ' ಮತ್ತು 'ಸಾವಿತ್ರಿ ಸತ್ಯವಾನರ ಕಥೆ' ಇವೆರಡೂ ಯುರೋಪಿನ ಜನಪ್ರೀತ ಆಖ್ಯಾನಗಳಾಗಿವೆ. ೧೮೧೯ರಲ್ಲಿ ಫ್ರಾಂಜ್‌ವಾಂತನು ನಳದಮಯಂತಿ ಕಥೆಯನ್ನು ಸಂಸ್ಕೃತ ಮೂಲ ಸಹಿತವಾದ ಲೆಟಿನ್ ಅನುವಾದದೊಂದಿಗೆ ಪ್ರಕಾಶಪಡಿಸಿದನು. ಈ ಅನುವಾದದಿಂದಲೇ ನಳದಮಯಂತಿ ಕಥೆಯು ಯುರೋಪಿನ ಇತರ ಭಾಷೆಗಳಿಗೂ ಪರಿವರ್ತಿಸ

ಲ್ಪಟ್ಟಿತು. ವಿಂಟರ್ ನಿಜ್‌ಸಾಹೇಬನು ಕಲ್ಕತ್ತಾ ಯುನಿವರ್ಸಿಟಿಯ ತನ್ನ ವ್ಯಾಖ್ಯಾನದಲ್ಲಿ—"ನಾನು, ನಲ್ವತ್ತು ವರ್ಷಗಳ ಹಿಂದೆ ಓದಿದ ಮೊದಲನೆಯ ಸಂಸ್ಕೃತ ಪುಸ್ತಕವೆಂದರೆ ನಳೋಪಾಖ್ಯಾನವು. ಅದರಿಂದಾದ ಸಂತೋಷವನ್ನು ಎಂದೂ ಮರೆಯಲಾರೆನು" ಎಂದಿದ್ದನು. ನಳೋಪಾಖ್ಯಾನವು ಕೂಡ ಯುರೋಪಿನಲ್ಲಿ ಹೆಸರುಪಡೆದ ಸಂಸ್ಕೃತ ಗ್ರಂಥ. ಕೇವಲ ಜರ್ಮನಿಯೊಂದರಲ್ಲೇ ಇದರ ಏಳು ಅನುವಾದಗಳಾಗಿವೆಯಂತೆ! ಜರ್ಮನಿ, ಫ್ರಾನ್ಸ್ ಮತ್ತು ಇಂಗ್ಲೆಂಡಿನ ರಂಗಮಂಚಗಳು ಇದನ್ನು ಅನೇಕ ಸರ್ತಿ ಅಭಿನಯಿಸಿರುತ್ತವೆ. ನಳದಮಯಂತಿ ಮತ್ತು ಸಾವಿತ್ರೀಸತ್ಯವಾನರು ಯಾವ ರೀತಿಯಿಂದ ಭಾರತೀಯರ ಹೃದಯದಲ್ಲಿ ನೆಲಸಿದ್ದಾರೋ ಅದೇ ರೀತಿಯಲ್ಲಿ ಪಾಶ್ಚಿಮಾತ್ಯರ ಹೃದಯದಲ್ಲಿಯೂ ನೆಲಸಿರುವರು.

ಇದಲ್ಲದೆ ಅನೇಕ ಸಣ್ಣ ಸಣ್ಣ ಕಥೆಗಳು ಜನತೆಯ ಮೂಲಕ ಹರಡಿವೆ. ಆದರೆ ಪುಸ್ತಕರೂಪವಾಗಿ ಪಂಚತಂತ್ರವೇ ಮೊದಲಾದ ಮೂರು ನಾಲ್ಕು ಪುಸ್ತಕಗಳು ಮಾತ್ರ ಹರಡಿಕೊಂಡಿವೆ. ಇವುಗಳಲ್ಲಿ ಬೇತಾಳ ಪಂಚವಿಂಶತಿಯೊಂದು. ಇದರ ಹಿಂದೀ ಅನುವಾದದಿಂದಲೂ ಇಂಗ್ಲಿಷ್, ಜರ್ಮನ್ ಭಾಷೆಗಳಿಗೆ ಪರಿವರ್ತಿಸಿದ್ದಾರೆ. ಇದೇ ರೀತಿಯಾಗಿ 'ದ್ವಾತ್ರಿಂಶತ್ಪುತ್ತಲಿಕಾ' ಎಂಬ ಗ್ರಂಥವೂ ಯುರೋಪಿನಲ್ಲಿ ಪ್ರಚಾರಗೊಂಡಿದೆ. ೧೫೭೪ರಲ್ಲಿ ಸಮ್ರಾಟ್ ಅಕ್ಬರನು 'ದ್ವಾತ್ರಿಂಶತ್ಪುತ್ತಲಿಕೆ'ಯನ್ನು ಪರ್ಶಿಯನ್ ಭಾಷೆಗೆ ಅನುವಾದ ಮಾಡಿಸಿದನು. ಮತ್ತು ಇದರಿಂದಲೇ ಒಂದು ಮಂಗೋಲಿಯನ್ ಅನುವಾದವು ಕೂಡ ಹುಟ್ಟಿತು. ಶುಕಸಪ್ತತಿ ಕಥೆಯು ತೂತೀನಾಮಾ' ಎಂಬ ಹೆಸರಿನಿಂದ ಪರ್ಶಿಯನ್ನಿಗೆ ಅನುವಾದಿಸಲ್ಪಟ್ಟು ಸಮಸ್ತ ಯುರೋಪಿನಲ್ಲಿ ಪ್ರಭಾವಯುಕ್ತವಾಗಿ ಪ್ರಸಾರವಾಗಿದೆ.

ಸಿಂದಬಾದ ನಾವಿಕ, ಅರೇಬಿಯನ್ ನೈಟ್ಸ್ ಮೊದಲಾದುವು ಗಳೂ ಭಾರತೀಯ ಕಥೆಗಳ ರೂಪಾಂತರವೆಂದು ಕೆಲ ಮಂದಿ ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಈ ಅಭಿಪ್ರಾಯವನ್ನು ಪುಷ್ಟಿಗೊಳಿಸುವಂತಹ ಯಾವ ಮೂಲ ಸಂಸ್ಕೃತ ಗ್ರಂಥಗಳೂ ಇಷ್ಟರ ವರೆಗೆ ದೊರಕದಿದ್ದರೂ ಆ ಕಥೆಗಳಲ್ಲಿ ಭಾರತೀಯ ಕಥೆ ಗಳ ಪ್ರಭಾವವು ಸಾಕಷ್ಟು ಬಿದ್ದಿದೆ ಎಂದು ಆ ಕಥೆಗಳಿಂದಲೇ ಕಂಡುಬರುತ್ತದೆ. ೯೫೬ನೇ ಇಸವಿಯಲ್ಲಿ ಪರಲೋಕವಾಸಿಯಾದ ಮಸೂದಿ ಎಂಬ ಅರಬೀ ಲೇಖಕನು ಸಿಂದಬಾದ ನಾವಿಕನ ಕಥೆಯು ಹಿಂದೂ ಗ್ರಂಥಗಳಿಂದ ತೆಗೆದುಕೊಂಡುದು ಎಂದು ಬರೆದಿದ್ದಾನೆ. ಸಿಂದಬಾದದ ಕಥಾಮುಖವೂ ಪಂಚತಂತ್ರದ ಕಥಾಮುಖವೂ ಸಾಮಾನ್ಯವಾಗಿ ಒಂದೇ ರೀತಿಯಾಗಿದೆ. ಕಥೆಗಳ ಕ್ರಮವೂ ಭಾರ ತೀಯವಾಗಿದೆ. ಸಿಂದಬಾದದಲ್ಲಿ ರಾಜಕುಮಾರರನ್ನು ಮೃತ್ಯುದಂಡ ದಿಂದ ಬದುಕಿಸುವ ಕಥೆ ಬಂದಿದೆ. ಭಾರತೀಯರಲ್ಲಲ್ಲದೆ ಬೇರೆ ಲ್ಲಿಯೂ ರಾಜಕುಮಾರರಿಗೆ ಮೃತ್ಯುದಂಡವನ್ನು ವಿಧಿಸುತ್ತಿರಲಿಲ್ಲ ವೆಂದು ಹೇಳಿಕೆ ಇರುವುದರಿಂದ ಇದು ಭಾರತೀಯ ಭಾವನೆಯೇ ಆಗಿದೆ. ವಿಂಟರ್‌ನಿಜ್ ಸಾಹೇಬರು ಕೂಡ ಇದರಲ್ಲಿ ಭಾರತೀಯ ಅಭಿಪ್ರಾಯಗಳು ತುಂಬಿವೆ ಎಂದೆ ಹೇಳುತ್ತಾರೆ.

ಅರೇಬಿಯನ್ ನೈಟ್ಸ್‌ನ ಕಥೆಗಳು ಪ್ರಪಂಚದಲ್ಲೆಲ್ಲಾ ಹರಡಿವೆ. ಇದರ ಮೂಲಸ್ಥಾನವು ಯಾವುದೆಂಬ ವಿಷಯದಲ್ಲಿ ವಿದ್ವಾಂಸರೊ ಳಗೆ ಮತಭೇದವಿದ್ದರೂ ಕೆಲಮಂದಿ ವಿದ್ವಾಂಸರು ಇದಕ್ಕೂ ಭಾರತ ವರ್ಷವೇ ಮೂಲಸ್ಥಾನವೆನ್ನುತ್ತಾರೆ. ಈ ವಿಷಯವನ್ನು ಪುಷ್ಟಗೊ ಳಿಸುವ ಪ್ರಮಾಣಗಳು ದೊರಕವಿದ್ದರೂ ಕಥೆ ಹೇಳುವ ಕ್ರಮವು ಭಾರತೀಯವೆಂದು ಕೆಲವರು ಸಿದ್ಧಪಡಿಸಿದ್ದಾರೆ. ಭಾರತೀಯರ ಎಷ್ಟೋ ಗ್ರಂಥಗಳು ಇನ್ನೂ ಅಜ್ಞಾತವಾಸದಲ್ಲೇ ಇವೆ. ಹನ್ನೆರ

ಡನೆಯ ಶತಮಾನದಲ್ಲಿ ಬರೆದ ಜೈನಗ್ರಂಥ ಒಂದರಲ್ಲಿ, ಅರೇಬಿಯನ್ ನೈಟ್ಸಿನಲ್ಲಿ ಶಹಾಜಾದಿಯು ಬಾದಶಹನಿಗೆ ಕಥೆ ಹೇಳುವಂತೆ ರಾಣೀ ಕಣ್ಣಮಂಜರಿಯು ರಾಜನಿಗೆ ಕಥೆ ಹೇಳುತ್ತಾಳೆ. ಮೂಲ ಭಾರತೀಯ ಕಥೆಗಳಿಗೆ ಅರಬರು ತಮ್ಮದನ್ನು ಸ್ವಲ್ಪ ಸೇರಿಸಿ ಅರೇಬಿಯನ್ ನೈಟ್ಸನ್ನು ತಯಾರಿಸಿರಬಹುದು.

ಭಾರತೀಯ ಕಥೆಗಳು ಎಂಬುದು ಸಾಮಾನ್ಯವಾದವುಗಳಲ್ಲ. ಕ್ರಿಸ್ತಪೂರ್ವ ೪೦೦ ವರ್ಷಗಳ ಮೊದಲಿನದೆಂದು ಹೇಳುವ ಬೌದ್ಧರ ಜಾತಕ ಕಥೆಗಳು ಬೌದ್ಧರೊಂದಿಗೆ ಅನೇಕ ದೇಶಗಳನ್ನು ಸಂಚರಿಸಿ ದುವು. ಆ ಕಾಲದಲ್ಲಿ ಭಾರತಕ್ಕೂ ಬೆಬಿಲೋನಿಯಕ್ಕೂ ಸಂಬಂಧ ವಿದ್ದ ವ್ಯಾಪಾರಿಕ ಕಥೆಗಳು ದೊರಕುತ್ತವೆ. ಇಸೋಪನ ನೀತಿ ಕಥೆಗಳಿಗೂ ಜಾತಕಕಥೆಗಳಿಗೂ ಸಂಬಂಧವಿದೆ. ಜಾತಕಕಥೆಗಳೂ, ಮಹಾಭಾರತದ ಕಥೆಗಳೂ ಬಹಳ ಪುರಾತನದವುಗಳೆಂದೂ ಜಾತಕ ಕಥೆಗಳಲ್ಲಿ ಜೋಡಿಸಿರುವ ಗಾದೆಗಳು ಅತ್ಯಂತ ಪುರಾತನದವುಗ ಳೆಂದೂ ಭಾಷಾತತ್ವಜ್ಞರು ಹೇಳುತ್ತಾರೆ.

ಜಾತಕಕಥೆಗಳಲ್ಲಿ ರಾಜನೊಬ್ಬನು ಒಬ್ಬ ಹೆಂಗಸಿನ ತಮ್ಮ, ಗಂಡ, ಮಗ ಈ ಮೂವರಿಗೂ ಮೃತ್ಯುದಂಡವನ್ನಿತ್ತನು. ಆಗ ಆ ಸ್ತ್ರೀಯು ಬಹಳವಾಗಿ ದುಃಖಿಸಲು ರಾಜನು "ಈ ಮೂವರಲ್ಲಿ ನಿನಗೆ ಯಾರು ಬೇಕು?" ಎಂದು ಕೇಳಿದನು. ಅದಕ್ಕಾಕೆಯು, "ಮಹಾ ರಾಜ! ಮಗನನ್ನು ಯಾವಾಗ ಬೇಕಾದರೂ ನಾನು ಹುಟ್ಟಿಸ ಬಲ್ಲೆನು. ದಾರಿ ನಡೆಯುತ್ತಿರುವಾಗಲೇ ಗಂಡನನ್ನು ಸಂಪಾದಿಸ ಬಲ್ಲೆನು. ಆದರೆ ತಮ್ಮನನ್ನು ಯಾವ ವಿಧದಿಂದಲೂ ಪಡೆಯಲಾರೆ ನಾದುದರಿಂದ ನನಗೆ ತಮ್ಮನೇ ಬೇಕು" ಎಂದಳು. ಈ ಮಾತಿಗೆ ರಾಜನು ಸಂತುಷ್ಟನಾಗಿ ಆ ಮೂವರನ್ನೂ ಬಿಟ್ಟನು. ಈ ಕಥೆಯು ಗ್ರೀಸಿನ ಹೆರೊಡೊಟಸನ ಗ್ರಂಥದಲ್ಲಿಯೂ ಇದೆಯಂತೆ.

ಸೊಲೋಮನನ ನ್ಯಾಯಕಥೆಗಳಿಗೂ ಭಾರತವರ್ಷವೇ ಮೂಲಸ್ಥಾನವೆಂದು ಕೆಲವರ ಮತವಾಗಿದೆ. 'ಮಹಾ ಉಮ್ಮಗ್ಗ' ಜಾತಕದಲ್ಲಿ ಇಬ್ಬರು ಹೆಂಗಸರು ಒಂದು ಮಗುವು ತನ್ನದು ತನ್ನ ದೆಂದು ಜಗಳಾಡುತ್ತಾರೆ. ಮಹೌಷಧನು ನ್ಯಾಯತೀರ್ಮಾನಕ್ಕಾಗಿ ನೆಲದಮೇಲೆ ಒಂದು ಗೆರೆ ಎಳೆದು ಆ ಮಗುವನ್ನು ಅದರ ಮೇಲೆ ಕುಳ್ಳಿರಿಸಿ ಇಬ್ಬರು ಹೆಂಗಸರು ಆ ಮಗುವಿನ ಕೈಗಳನ್ನು ಹಿಡಿದು ಎಳೆಯಬೇಕೆಂದೂ ಯಾವ ಕಡೆಗೆ ಮಗು ಬರುತ್ತದೋ ಆ ಹೆಂಗ ಸಿಗೆ ಆ ಮಗುವೆಂದೂ ಹೇಳಿದನು. ಹೆಂಗಸರು ಹಾಗೆ ಮಗುವಿನ ಕೈಗಳನ್ನು ಹಿಡಿದೆಳೆಯುವಾಗ ಮಗು ಅತ್ತಿತು; ಆಗ ನಿಜವಾದ ತಾಯಿಯು ಎಳೆಯುವದನ್ನು ಬಿಟ್ಟಳು. ಅವಳೇ ತಾಯಿ ಎಂದು ನಿಶ್ಚಯವಾಯಿತು. ಸೊಲೋಮನನ ಕಥೆಗಳಲ್ಲಿಯೂ ಇಂತಹ ಒಂದು ಕಥೆ ಇದೆ. ಕೆಲವು ವಿದ್ವಾಂಸರು ಇದರ ಮೂಲವು ಹಿಬ್ರೂ ವಿನಲ್ಲಿದೆ ಎಂದೂ, ಕೆಲವರು ಈಜಿಪ್ಷಿಯನ್ ಭಾಷೆಯಲ್ಲಿದೆ ಎಂದೂ ಹೇಳುತ್ತಾರೆ. ಆದರೆ ಅಧಿಕಾಂಶ ವಿದ್ವಾಂಸರು ಈ ಕಥೆಗೆ ಭಾರತ ವರ್ಷವೇ ಮೂಲವೆನ್ನುತ್ತಾರೆ. ಚೀನದಲ್ಲಿ ಈ ಕಥೆಯು ಒಂದು ನಾಟಕ ರೂಪದಿಂದ ದೊರಕುತ್ತದೆ.

ಜಾತಕಕಥೆಗಳಲ್ಲಿ ಬಂದ ಇನ್ನೊಂದು ಕೃಶಾಗೌತಮಿಯ ಕಥೆ. ಕೃಶಾಗೌತಮಿಯು ತನ್ನ ಮೃತಪುತ್ರನ ದೇಹವನ್ನು ಹೊತ್ತುಕೊಂಡು ಗೌತಮ ಬುದ್ಧನಲ್ಲಿಗೆ ಬಂದು—"ಭಗವನ್, ನನ್ನ ಪುತ್ರನನ್ನು ಬದುಕಿಸು" ಎಂದಳು. ಅದಕ್ಕೆ ಬುದ್ಧದೇವನು- "ಇಷ್ಟರವರೆಗೆ ಯಾರೂ ಸಾಯದಿರುವ ಮನೆಯಿಂದ ಸ್ವಲ್ಪ ಧಾನ್ಯದ ಕಾಳುಗಳನ್ನು ತಂದರೆ ನಿನ್ನ ಮಗನನ್ನು ಜೀವಿಸಬಹುದು" ಎಂದುತ್ತ ರವಿತ್ತನು. ಕೃಶಾಗೌತಮಿಗೆ ಅಂತಹ ಮನೆಯೊಂದೂ ಸಿಕ್ಕದಿರು ವುದರಿಂದ ಮರಣವು ಅವಶ್ಯಂಭಾವಿಯೆಂದು ತಿಳಿದು ಆಕೆಯು

ಸಂತೋಷದಿಂದ ಹಿಂತಿರುಗಿದಳು. ಇದೇ ತರದ ಕಥೆಗಳು ಅರಬ್ಬಿ, ಹಿಬ್ರೂ, ಗ್ರೀಕ, ಪಾರಸಿ ಮೊದಲಾದ ಭಾಷೆಗಳಲ್ಲಿಯೂ ಇವೆ. ಇಂತಹ ಕಥೆಗಳಿಗೆ ಮೂಲವು ಭಾರತವರ್ಷವಲ್ಲದೆ ಬೇರೆಯಲ್ಲವೆಂದೂ ಮೃತ್ಯುವಿಗೆ ದುಃಖಿಸದಿರುವ ಭಾವನೆಯು ಭಾರತೀಯವೆಂದೂ ವಿದ್ವಾಂಸರ ಅಭಿಪ್ರಾಯವಾಗಿದೆ. ಇಂತಹ ಕಥೆಗಳು ಜಾತಕಗಳಲ್ಲಿಯೂ ಜೈನ ಗ್ರಂಥಗಳಲ್ಲಿಯೂ ಮಹಾಭಾರತದಲ್ಲಿಯೂ ದೊರಕುತ್ತವೆ.

ಸಮಸ್ತ ಜಗತ್ತಿನ ಕಥೆಗಳಿಗೆಲ್ಲಾ ಭಾರತವೇ ಮೂಲಸ್ಥಾನವೆಂದು ಹೇಳುವುದು ಅಸಾಧ್ಯವಾದರೂ, ಲೋಕದಲ್ಲಿದ್ದ ಹೆಚ್ಚು ಕಥೆಗಳಿಗೆ ಮೂಲಸ್ಥಾನವು ಭಾರತವರ್ಷವೆಂದು ನಿಸ್ಸಂದೇಹವಾಗಿ ಹೇಳಬಹುದು. (ಸಂಗ್ರಹಿಸಿ ಬರೆದುದು)

---

೪

# ಮಕ್ಕಳ ಸಾಹಿತ್ಯ

ಅತಿ ಪುರಾತನ ಕಾಲದಿಂದ ನಾಗರಿಕರಾಗಿ ವಿದ್ಯಾಬುದ್ಧಿಗಳಲ್ಲಿ ಮೇಲ್ಮಟ್ಟದವರೆಂದು ಹೆಸರುಪಡೆದ ಭಾರತೀಯರಾದ ನಾವು ನಮ್ಮ ಹೆಮ್ಮೆಯ ಸ್ವಾಭಿಮಾನದ, ಅಂತಃಕಲಹದ ಪರಿಣಾಮವಾಗಿ ಸ್ವಾತಂತ್ರ್ಯವನ್ನು ಕಳಕೊಂಡು ವಿದೇಶೀಯರಾದ ಆಂಗ್ಲರ ಅಡಿಯಾಳುಗಳಾದೆವಷ್ಟೆ. ಜೀವನದ ಪ್ರತಿಯೊಂದು ವಿಭಾಗವನ್ನೂ ಸೂಕ್ಷ್ಮ ವಿಮರ್ಶೆಯಿಂದ ಈಕ್ಷಿಸುವ ಆಂಗ್ಲರ ಅಧಿಕಾರ ನಮ್ಮಲ್ಲಿ ಬಂದೊಡನೆಯೇ ನಮ್ಮ ಜೀವನದಲ್ಲಿ, ನಡೆಯಲ್ಲಿ, ನುಡಿಯಲ್ಲಿ, ವಿಚಾರ ಸರಣಿಯಲ್ಲಿ ಬದಲಾವಣೆಗಳಾಗತೊಡಗಿದುವು. ಆಂಗ್ಲ ಸರಕಾರ ನಮ್ಮನ್ನು ಆಳತೊಡಗಿದಾಗ ನಮ್ಮ ದೇಶದ ವಿದ್ಯಾಭ್ಯಾಸ ಪದ್ಧತಿಯಲ್ಲಿ ಮೊದಲಿದ್ದ ರೀತಿ ನೀತಿಗಳನ್ನು ಬದಲಾಯಿಸಿ ಹೊಸ ಕ್ರಮಗಳನ್ನು ಪ್ರಚಾರಕ್ಕೆ ತಂದಿತು. ಹಾಗೆ ಪ್ರಚಾರಕ್ಕೆ ತರುವಾಗ ಆ ಹೊಸ ಕ್ರಮಕ್ಕೆ ಅನುಸಾರವಾಗಿ ಹೊಸಬಗೆಯ ಪಾಠಪುಸ್ತಕಗಳೂ ರಚಿತವಾದುವು. ನಮ್ಮ ದೇಶದ ಸಾಹಿತ್ಯಾಂಗದಲ್ಲಿಯೂ ಬದಲಾವಣೆಯಾಯಿತು.

ಹೊಸ ಪದ್ಧತಿಗನುಸಾರವಾಗಿ ವಿದ್ಯಾಭ್ಯಾಸ ಕ್ರಮ ಮುನ್ನಡೆದಾಗ ಬಾಲಸಾಹಿತ್ಯವೆಂಬ ಮಕ್ಕಳಿಗಾಗಿ ಪ್ರತ್ಯೇಕ ಸಾಹಿತ್ಯವಿಭಾಗ ಮೂಡಿಕೊಂಡಿತು. ಈ ಬಾಲಸಾಹಿತ್ಯವೆಂಬ ವಿಭಾಗ ಆಂಗ್ಲರು ನಮಗೆ ಹೊಸತಾಗಿ ತಂದುಕೊಟ್ಟ ವಿಷಯವಲ್ಲದಿದ್ದರೂ ತೋರಿಸಿಕೊಟ್ಟ ವಿಷಯವಾಗಿದೆ.

ಮನುಷ್ಯನು ಕಾಡಾಡಿಯಾಗಿರುವಾಗಲೇ ಕಥಾಸಾಹಿತ್ಯ, ಗೀತ

ಸಾಹಿತ್ಯಗಳು ಹುಟ್ಟಿಕೊಂಡುವು. ಅಜ್ಜಿಯ ಜೋಗುಳದ ರಾಗಕ್ಕೆ ಕಿರುಕಂದ ತಲೆದೂಗಿತು, ಕಣ್ಣುಮುಚ್ಚಿ ಸೊಗಸಾಗಿ ನಿದ್ದೆಮಾಡಿತು. ಮುಂದೆ ಕಿರುಬಾಲ ಬಳೆದುಬಂದಾಗ, ತೊದಲು ಮಾತಿಗೆ ತೊಡಗಿದಾಗ, ತಾನು ಕಂಡ ವಸ್ತುಗಳ ವಿಚಾರವಾಗಿ ಅದು ಏನು? ಇದು ಏನು? ಎಂದು ಪ್ರಶ್ನಿಸತೊಡಗಿದಾಗ ಮಗುವಿನ ಕುತೂಹಲವನ್ನು ಸಮಾಧಾನಪಡಿಸಲಿಕ್ಕಾಗಿ ಅಜ್ಜಿ ಅದ್ಭುತರಮ್ಯ ಕತೆ ಹೇಳತೊಡಗಿದಳು; ಮಗು ಹೇಳಿದ ಮಾತು ಕೇಳದಿದ್ದಾಗ ಭೂತಭೇತಾಳಗಳ ಕತೆಹೇಳಿ ಹೆದರಿಸಿದಳು; ಮಗು ನೇರಾದ ದಾರಿಯನ್ನು ಬಿಟ್ಟು ಕೊಂಕುದಾರಿ ಹಿಡಿದಾಗ ನೀತಿಕತೆಗಳನ್ನು ಹೇಳಿದಳು. ತನ್ನ ಹಿರಿಯರಂತೆ ವೀರ ಧೀರನಾಗಬೇಕೆಂದು ವೀರ ಕತೆಗಳನ್ನು ಹೇಳಿದಳು. ಹೀಗೆ ಮಕ್ಕಳ ಸಾಹಿತ್ಯ ಆಯಾ ದೇಶದ ರೀತಿಗಳಿಗೆ ತಕ್ಕಂತೆ ಬೆಳೆಯುತ್ತ ಬಂತು. ಈ ಬಗೆಯ ಸಾಹಿತ್ಯರಚನೆಯಲ್ಲಿ ಮುದಿಯಜ್ಜಿ ಸಿದ್ಧಹಸ್ತಳಾದುದರಿಂದ ಅವಳು ತಾನು ಹಿಂದೆ ಕೇಳಿದ್ದಕ್ಕೆ ತನ್ನದನ್ನೂ ಸೇರಿಸಿ ಬೆಳೆಸಿದಳು. ವೇದದಂತೆ ಕಿವಿಯಿಂದ ಕೇಳಿ ತಿಳಿಯುಬಹುದಾದ ಈ ಮಕ್ಕಳಸಾಹಿತ್ಯ ಬರವಣಿಗೆಗೆ ಬರಲಿಲ್ಲ. ಹಾಗೆ ಬಾರದಿರಲು ಕಾರಣವಿದೆ. ಕಲಿತವರ ದೃಷ್ಟಿಯಿಂದ ಇದು ಸಾಮಾನ್ಯ ಸಾಹಿತ್ಯವಾಗಿತ್ತು. ಕಲಿತವರು ತಾವು ಜನಸಾಮಾನ್ಯರಿಂದ ಪ್ರತ್ಯೇಕವೆಂದು ತಿಳಿದುದೂ ಒಂದು ಕಾರಣ.

ಕಳೆದ ಶತಮಾನದಲ್ಲಿ ಕನ್ನಡದಲ್ಲಿ ಮಕ್ಕಳಿಗಾಗಿ ಪಠ್ಯಪುಸ್ತಕಗಳನ್ನು ರಚಿಸಲು ಪ್ರಾರಂಭವಾದೊಡನೆಯೇ ಬಾಲಸಾಹಿತ್ಯ ರಚನೆಗೆ ಪ್ರಾರಂಭವಾಯಿತೆಂದು ಹೇಳಬಹುದಾದರೂ, ಬಾಲಕರಿಗಾಗಿ ಪ್ರತ್ಯೇಕ ಸಾಹಿತ್ಯ–ಕತೆ, ಕವನಗಳು ರಚಿತವಾಗತೊಡಗಿದುದು ಈ ಶತಮಾನದ ಪ್ರಾರಂಭದಲ್ಲಿಯೇ ಆಗಿದೆ. ವಿದ್ಯಾಭ್ಯಾಸ ಕ್ರಮವನ್ನು ಸೂಚಿಸಿದ ಆಂಗ್ಲ ತಜ್ಞರು ಮಕ್ಕಳಿಗಾಗಿ ಸಾಹಿತ್ಯ ರಚಿಸಬೇಕೆಂದು

ಯೋಚಿಸಿ, ದೇಶೀಯ ಪಂಡಿತರೊಡನೆ ಹೇಳಿ ಕೇಳಿ ನಮ್ಮ ದೇಶದಲ್ಲಿ ಮೊದಲೇ ಪ್ರಚಾರದಲ್ಲಿದ್ದ ಅಜ್ಜಿಕತೆಗಳನ್ನೋ ಜೋಗುಳಗಳನ್ನೋ ಬಂಡಿ ಪದಗಳನ್ನೋ ಬೇಕಾದ ಹಾಗೆ ಪಠ್ಯಪುಸ್ತಕದಲ್ಲಿ ಸೇರಿಸಿದರೇ ವಿನಾ ಹತ್ತೊಂಬತ್ತನೆಯ ಶತಮಾನದ ಯಾವ ಮಹಾ ಕನ್ನಡ ಸಾಹಿತಿಯೂ ಈ ಗದ್ದೆ ಉಳುವ ಕೆಲಸಕ್ಕೆ ಕೈಯಿಕ್ಕಲಿಲ್ಲ. ಇಂದಿಗೂ ಕನ್ನಡದ ಮಹಾ ಸಾಹಿತಿಗಳಲ್ಲಿ ಹೆಚ್ಚಿನವರು ಬಾಲಸಾಹಿತ್ಯದ ಕಡೆಗೆ ಕೃಪಾದೃಷ್ಟಿ ಬೀರಿಲ್ಲ.

ಬಾಲಕರಿಗೆ, ಆರರಿಂದ ಹನ್ನೆರಡು ಅಥವಾ ಹದಿಮೂರು ವರ್ಷ ಪ್ರಾಯದ ಮಕ್ಕಳಿಗೆ, ಎಂತಹ ಸಾಹಿತ್ಯ ರುಚಿಸಬಹುದೆಂದೂ ಎಂತಹ ಸಾಹಿತ್ಯದಿಂದ ಪ್ರಯೋಜನವಾಗಬಹುದೆಂದೂ ಶಿಕ್ಷಣ ತಜ್ಞರಾದ ಸಾಹಿತಿಗಳು ಅನುಭವ ಪ್ರಯೋಗಗಳಿಂದ ಒಂದು ನಿರ್ಧಾರಕ್ಕೆ ಬಂದು ಆ ಸಾಹಿತ್ಯ ರಚನೆಯ ವಿಚಾರದಲ್ಲಿ ಹಲವು ಸೂಚನೆಗಳನ್ನು ಇತ್ತಿದ್ದಾರೆ.

ಮಕ್ಕಳ ಕಥೆ ಮಕ್ಕಳ ಲೋಕವನ್ನು ಬಿಟ್ಟಿರಬಾರದು; ಅವರ ಕಲ್ಪನಾಶಕ್ತಿಯ ಗಡಿಯೊಳಗಿರಬೇಕು. ಮಕ್ಕಳಲ್ಲಿ ಕಲ್ಪನಾಶಕ್ತಿ ಹೆಚ್ಚು. ಕಥೆಗಳಲ್ಲಿ ಒಂದಿಷ್ಟು ಅದ್ಭುತ ರಸವಿದ್ದರೆ ಆ ಕಲ್ಪನಾ ಶಕ್ತಿಗೆ ಚಾಲನೆ ಕೊಟ್ಟಂತೆ ಆಗುತ್ತದೆ. ಕಥೆಗಳಲ್ಲಿ ಧರ್ಮಬೋಧೆ ನೀತಿಬೋಧೆಗಳು ಮುಖ್ಯವಾಗಿರದೆ ಗೌಣವಾಗಿರುವುದು ಲೇಸು. ಧರ್ಮಬೋಧೆ ನೀತಿಬೋಧೆಗಾಗಿಯೇ ಕತೆ ಕಟ್ಟಿದಂತಿರಬಾರದು. ಮನರಂಜನೆಯೊಂದಿಗೆ, ಕಲ್ಪನಾಶಕ್ತಿಯ ಕುದುರುವಿಕೆಯೊಡನೆ ಅರಿತೂ ಅರಿಯದಂತೆ ಧರ್ಮಬೋಧೆ, ನೀತಿಬೋಧೆ ಆಗುವುದಿದ್ದರೆ ಆಗಲಿ. ಕತೆಗಳ ಭಾಷೆ ಎಷ್ಟು ಸುಲಭ, ಎಷ್ಟು ಸರಳವಾಗಿದೆಯೋ ಅಷ್ಟೂ ಆ ಕತೆಗಳು ಉತ್ತಮವಾಗುವುವು. ಮಕ್ಕಳು ಮನೆಯಲ್ಲಿ ಮನೆಯ ಹೊರಗೆ ನಿತ್ಯವೂ ಕೇಳುವ ಶಬ್ದಗಳೇ

ತುಂಬಿದ್ದು ಚಿಕ್ಕ ಚಿಕ್ಕ ವಾಕ್ಯಗಳಾಗಿ ಯಮಕದಿಂದ ತುಂಬಿರಬೇಕು. ಇಲ್ಲಿ ಸುಲಭ ಭಾಷೆಯೆಂದರೆ ವಿಷಯದ ಚಿತ್ರ ಮಕ್ಕಳ ಮನಸ್ಸಿನಲ್ಲಿ ಸ್ಪಷ್ಟವಾಗಿ ಅಂಕಿತವಾಗುವ ಭಾಷೆ. ಕೃತಕ ಅಲಂಕಾರ, ಸಮಾಸಗಳ ಗೊಡವೆಯಿರಬಾರದು. ಸ್ವಭಾವೋಕ್ತಿಯಿಂದಲೇ ಭಾಷೆ ಮುಂದುವರಿಯಬೇಕು. ಕತೆಗಳಲ್ಲಿ ಹೇಳಿಕೆಗಳಿಗಿಂತ ಸಂಭಾಷಣೆಗಳ ಕಡೆಗೆ ಹೆಚ್ಚು ಗಮನವೀಯಬೇಕು. ಸಣ್ಣ ಮಕ್ಕಳ ಕತೆಗಳಲ್ಲಿ ಹೇಳಿದ ಮಾತನ್ನೇ ಮತ್ತು ಮತ್ತು ಹೇಳುವ ಪುನರುಕ್ತಿ ಬಂದರೆ ಅದು ದೋಷವಲ್ಲ, ಗುಣ. ಕವನಗಳು ಅಂತ್ಯಪ್ರಾಸದಿಂದ ಕೂಡಿ ಕಿವಿಗೆ ಇಂಪಾಗಿ ನಾದಮಯವಾಗಿರಬೇಕು. ಶಬ್ದಜಾಲ ಮಕ್ಕಳ ಮೈ ಮನಗಳನ್ನು ಕುಣಿಸುವಂತಿರಬೇಕು. ಇದಿಷ್ಟು ಹೆಚ್ಚು ಕಡಿಮೆ ಬಾಲಸಾಹಿತ್ಯದ ಲಕ್ಷಣ. x

x ಇದನ್ನು ಆರಂಭಿಸಿದವರು ಪಂಜೆ ಮಂಗೇಶರಾಯರು.

---

